ಕರ್ನಾಟಕ ಹಿತೈಷಿಣೀ ಗ್ರಂಥಮಾಲೆಯ

**ಆರನೆಯ ಪುಷ್ಪವು.**

ಕರ್ನಾಟಕ

# ಕವಿತಾ ಕುಸುಮ ಮಂಜರಿ.

ಇದನ್ನು

ಕರ್ನಾಟಕ ಹಿತೈಷಿಣೀ ಗ್ರಂಥಮಾಲೆಯ ಸಂಪಾದಕರಾದ

**ನಾರಾಯಣ ವೆಂಕಟೇಶ ಕುರಡಿ**

ಇವರು ರಚಿಸಿದರು.



ಟಕ ಪ್ರಿಂಟಿಂಗ ವರ್ಕ್ಸ ಧಾರವಾಡ.

**ಬೆಲೆ ೫ ಅಣೆಗಳು.**

ಕಾಯಂ ವರ್ಗಣೀದಾರರಿಗೆ ೪ ಆಣೆ; ಅಂಚೆಯ ವೆಚ್ಚ ಬೇರೆ.

ಇದನ್ನು ಧಾರವಾಡದ [illegible]ಗೆ ಶ್ರೀಯುತ ಯಶವಂತರಾವ ಜಠಾರ B. A., LL. B.
ಇವರು ತಮ್ಮ "ಕರ್ನಾಟಕ ಪ್ರಿಂಟಿಂಗವರ್ಕ್ಸ" ದಲ್ಲಿ ಮುದ್ರಿಸಿದರು.
ಮತ್ತು
ಶ್ರೀ. ನಾರಾಯಣ ವೆಂಕಟೇಶ ಕುರಡಿ, ಇವರು
ವಿಜಾಪುರದಲ್ಲಿ ಶ್ರೀ ಸರಸ್ವತೀ ಮಂದಿರದಲ್ಲಿ ಪ್ರಕಟಿಸಿದರು.

# ಪ್ರಸ್ತಾವನೆ.

ನಮ್ಮ ಮನೋಭಾವನೆಗಳನ್ನು ಪರರಿಗೆ ವ್ಯಕ್ತಪಡಿಸಲಿಕ್ಕೆ ಭಾಷೆ ಎಂಬ ದೊಂದು ಸಾಧನವನ್ನು ಮನುಷ್ಯಪ್ರಾಣಿಯು ತನ್ನ ಸ್ವಂತ ಪ್ರಯತ್ನದಿಂದ ದೊರಕಿಸಿ ಕೊಂಡಿರುವನೆಂದು ಅರ್ವಾಚೀನ ಶಾಸ್ತ್ರಜ್ಞರು ಪ್ರಯೋಗಗಳ ಮುಖಾಂತರ ಕಂಡು ಹಿಡಿದಿರುವರು. ಸದ್ಯಕ್ಕೆ ಪ್ರಚಲಿತವಾಗಿರುವ ಭಾಷೆಗಳು ಎಷ್ಟು ಸುಸಂಸ್ಕೃತಿಯನ್ನು ಹೊಂದಿದ್ದರೂ ನಮ್ಮ ನಾನಾ ಬಗೆಯ ಮನೋವಿಕಾರಗಳನ್ನು ವ್ಯಕ್ತಪಡಿಸುವಷ್ಟು ಸಾಮರ್ಥ್ಯವು ಅವುಗಳಲ್ಲಿ ಸ್ವಭಾವತಃ ಇಲ್ಲದ್ದರಿಂದ ಅವು ಆ ಚಂದ್ರಾರ್ಕ ಅಪೂರ್ಣವಾಗಿಯೇ ಉಳಿಯುವವು. ಭಾಷೆಯೆಂಬ ಸಾಧನದಿಂದ ನಮಗೆ ವ್ಯಕ್ತಪಡಿಸಲಿಕ್ಕಾಗದ ಅನೇಕ ಸಂಗತಿಗಳನ್ನು ನಾವು ಸಿತ್ಯಶಃ ಅಂಗಚೇಷ್ಟೆ, ಹಾವಭಾವ, ಸ್ವರಭೇದ ಮೊದಲಾದವುಗಳಿಂದ ತಕ್ಕಮಟ್ಟಿಗೆ ವ್ಯಕ್ತಪಡಿಸಿ ಆಬಗೆಯ ಕೊರತೆಗಳನ್ನು ಪೂರೈಸಿಕೊಳ್ಳುತ್ತಿರುವೆವು ನಾವು ಸುಧಾರಿಸುತ್ತ ನಡೆದಂತೆ ನಮ್ಮ ಕೊರತೆಗಳು ಹೆಚ್ಚುತ್ತ ಹೋಗುವವು. ಇದರಿಂದ ಒಂದು ಕಾಲದಲ್ಲಿದ್ದ ಭಾಷೆಯೊಳಗಿನ ಶಬ್ದಗಳಿಂದ ಬೇರೊಂದು ಕಾಲದಲ್ಲಿ ಪ್ರಗಮನಶೀಲವುಳ್ಳ ಜನತೆಯ ಮನೋವಿಕಾರಗಳನ್ನು ವ್ಯಕ್ತಪಡಿಸುವದು ದುಸ್ಸಾಧ್ಯವು.

ಗ್ರಂಥಸ್ಥ ಭಾಷೆಯು ಗದ್ಯಪದ್ಯಗಳ ರೂಪದಿಂದ ನಮ್ಮ ಆಚಾರ ವಿಚಾರ, ಆಹಾರವಿಹಾರಗಳ ಆಯಾ ಕಾಲದ ಆದರ್ಶವಾಗಿರುವದು. ಭಾಷೆಯ ಗದ್ಯಸ್ವರೂಪಕ್ಕಿಂತ ಪದ್ಯಸ್ವರೂಪವು ಕೆಲವು ವಿಶೇಷ ಕಾರಣಗಳ ಮೂಲಕ ಯಾವದೊಂದು ವಾಙ್ಮಯದಲ್ಲಿ ಪ್ರಾಧಾನ್ಯವನ್ನು ಹೊಂದಿರುವದು. ಚಮತ್ಕೃತಿಯಿಲ್ಲದೆ ಪದ್ಯವಾಗಲಾರದು. ಜಗತ್ತಿನಲ್ಲಿ ಜೀವನಕಲಹದ ಎಳತಕ್ಕೆ ಒಳಪಟ್ಟು ಒಂದು ಪ್ರಕಾರದ ಕರ್ಕಶಚಿತ್ತವೃತ್ತಿಯುಳ್ಳವರಾದ ನಮ್ಮ ಮನಸ್ಸಿಗೆ ಕೋಮಲತೆಯನ್ನುಂಟು ಮಾಡುವ ಕಲೆಗಳಲ್ಲಿ ಚಿತ್ರಕಲೆ, ಸಂಗೀತ, ಕಾವ್ಯ ಇವೇ ಮೊದಲಾದವುಗಳ ಸಮಾವೇಶವಾಗುವದು. ಅವುಗಳಲ್ಲಿ ಕಾವ್ಯಕಲೆಯು ಮಿಗಿಲಾದದ್ದೆಂದು ಹೇಳಬಹುದು. ಸಂಸಾರವೆಂಬ ಚಕ್ರದಲ್ಲಿ ಸಿಕ್ಕು ತಾಪತ್ರಯದ ಮೂಲಕ ಬಳಲಿ ಬೆಂಡಾದ ಮಾನವರ ಮನಸ್ಸನ್ನು ತತ್ಕಾಲಕ್ಕಾದರೂ ಶಾಂತಗೊಳಿಸಿ ಅವನ್ನು ಸೊಗಸುಗೊಳಿಸುವ ಉಚ್ಚತಮವಾದ ಕಾರ್ಯವನ್ನು ಕಾವ್ಯವಾಙ್ಮಯವು ತನ್ನ ಕಡೆಗೆ ವಹಿಸಿಕೊಂಡಿರುವದು.

ಕನ್ನಡ ಕಾವ್ಯವಾಙ್ಮಯವನ್ನು ಪರಿಶೀಲಿಸಿ ನೋಡಿದರೆ ಅದರಲ್ಲಿ ಪುರಾತನ ಪ್ರಸಿದ್ಧರಾದ ಅನೇಕ ಕವಿಗಳ ಉತ್ತಮೋತ್ತಮ ಪದ್ಯಕಾವ್ಯಗಳು ತುಂಬಿ ತುಳುಕು

ವದನ್ನು ಕಾಣಬಹುದು. ಆದರೂ ಕಾಲಚಕ್ರವು ತಿರುಗುತ್ತ ನಡೆದಂತೆ ಪ್ರಾಚೀನ ಮಹಾಕಾವ್ಯಗಳೆಂಬ ಸಮುದ್ರಕ್ಕೆ, ಹೊಸಹೊಸ ಭಾವಗಳು, ಹೊಸ ಹೊಸ ಪರಿಸ್ಥಿತಿ, ಹೊಸಹೊಸ ನಡೆನುಡಿಗಳು, ಇವೇ ಮೊದಲಾದವುಗಳನ್ನು ಒಡಮೂಡಿಸಿ ಚಿತ್ರಿಸುವ ಸರಿತ್ತುಗಳಂತಿರುವ ನೂತನ ಕಾವ್ಯಗಳು ಸೇರಿ ಜನರ ಅಭಿರುಚಿಯಲ್ಲಿ ಒಂದು ಪ್ರಕಾರದ ನವೀನತೆಯನ್ನು ಉಂಟುಮಾಡುವದು ಅವಶ್ಯವು- ಹೀಗಿರದಿದ್ದರೆ ಜಗತ್ತಿನಲ್ಲಿ ನವೀನತೆಯೂ ವೈಚಿತ್ರ್ಯವೂ ಕಾಣದೆ ಜಗತ್ತಿನ ಪ್ರಾಗತಿಕ ಸ್ವರೂಪವೇ ಬದಲಾಗಿ ಒಂದು ಪ್ರಕಾರದ ನಿಸ್ಸಾರವು ಎಲ್ಲಿ ನೋಡಿದರೂ ದೃಗ್ಗೋಚರವಾಗುತ್ತಿತ್ತು. ವೈಷಮ್ಯದಿಂದಲೇ ಜಗತ್ತಿಗೆ ಸ್ವಾರಸ್ಯವುಂಟಾಗಿದೆಯೆಂದು ಹೇಳಬಹುದು. ಮಹಾಕಾವ್ಯಗಳಿಂದ ಪಂಡಿತರಿಗೆ ಆನಂದವಾಗುವಂತೆ ಹೊಸಹೊಸ ಭಾವನೆಗಳನ್ನೊಳಕೊಂಡ ಲಘುಕಾವ್ಯಗಳಿಂದಲೂ ಖಂಡಕಾವ್ಯಗಳಿಂದಲೂ ಪಾಮರರಿಗೂ ಕೂಡ ಅಷ್ಟೇ ಆನಂದವಾಗುವದು. ನಮ್ಮ ಪುರಾತನ ಮಹಾಕಾವ್ಯ ಭಾಂಡಾರವು ಸರಸವೂ ಸುಶ್ರಾವ್ಯವೂ ಆಗಿದ್ದರೂ ಕಾಲಮಹಿಮೆಯಿಂದ ಕನ್ನಡ ಭಾಷೆಯ ಸ್ವರೂಪವು ತೀರ ಬದಲಾಗುತ್ತ ನಡೆದದ್ದರಿಂದ ಪಂಡಿತರ ಸಹಾಯವಿಲ್ಲದೆ ಅವುಗಳ ಸ್ವಾರಸ್ಯವನ್ನು ಗ್ರಹಿಸುವದು ಸಾಮಾನ್ಯ ಜನರಿಗೆ ದುಸ್ಸಾಧ್ಯವಾಗಿರುವದು. ನಮ್ಮಲ್ಲಿರುವ ಉತ್ಕೃಷ್ಟ ಗ್ರಂಥಗಳು ಏನಿಲ್ಲೆಂದರೂ ಸಾವಿರೆರಡು ಸಾವಿರ ವರುಷಗಳ ಹಿಂದೆಯೇ ಬರೆಯಲ್ಪಟ್ಟಿರುವವು. ಇಷ್ಟು ಅವಧಿಯಲ್ಲಿ ಭಾಷೆಯ ಸ್ವರೂಪವು ಇದ್ದಕ್ಕಿದ್ದಂತೆ ಉಳಿಯುವ ಬಗೆಯಾದರೂ ಹೇಗೆ? ಕಾವ್ಯಗಳ ಭಾಷೆಯು ಸಾಧ್ಯವಿದ್ದಮಟ್ಟಿಗೆ ಆಯಾ ಕಾಲದ ಜನರಾಡುವ ಭಾಷೆಗೆ ಹೋಲುವದು ಅತ್ಯವಶ್ಯವು. ಕಾವ್ಯವು ಈ ನಿಯಮವನ್ನನುಸರಿಸಿದ್ದಾದರೆ ಅದರಿಂದ ಪಾಠಕರ ಮನಸ್ಸಿನಲ್ಲಿ ಸುಪರಿಣಾಮವಾಗಹತ್ತಿ ಅದರ ಕ್ಷೇತ್ರವಾದರೂ ವಿಸ್ತೃತವಾಗಹತ್ತುವದು. ಪ್ರಾಚೀನ ಮಹಾಕವಿಗಳು ತಮ್ಮ ಗ್ರಂಥಗಳಲ್ಲಿ ಉಪಯೋಗಿಸಿದ ಭಾಷೆಯು ಕಾಲಮಹಿಮೆಯಿಂದ ದುರ್ಬೋಧವಾಗ ತೊಡಗಲು ಕಾವ್ಯದ ನಿಜಸ್ವರೂಪವನ್ನು ಕಂಡು ಹಿಡಿದ ಮಧ್ಯಕಾಲದ ಕವಿಗಳು ಪ್ರಾಚೀನ ಮಹಾಕವಿಗಳು ಹಿಡಿದ ಮಾರ್ಗವನ್ನು ಬಹುಮಟ್ಟಿಗೆ ಬದಲಿಸಿ ಹೊಸ ದಾರಿಯನ್ನು ಹಿಡಿದು ಸುರಸವಾದ ಹಾಗು ಬಹ್ವಂಶದಿಂದ ಛಂದಸ್ಸಿನ ಬಂಧನಗಳಿಂದ ಬಿಡಿಸಿಕೊಂಡ ಷಟ್ಪದೀ ಕಾವ್ಯಗಳನ್ನು ಬರೆದು ಅವುಗಳಲ್ಲಿ ಹೊಸಹೊಸ ವಿಚಾರಗಳು ಅಡಕವಾಗುವಂತೆ ಮಾಡಿದರು. ಮಧ್ಯಕಾಲದ ಕವಿಗಳು ಕನ್ನಡ ಭಾಷೆಯ ಹಳೆಹೊಸ ಸ್ವರೂಪಗಳಲ್ಲಿ ಒಂದು ಬಗೆಯ ಯೋಜನೆಯು ಇರುವಂತೆ ಮಾಡಿದ್ದಲ್ಲದೆ ಕನ್ನಡದಲ್ಲಿ ಬಂದುಸೇರಿ

ಅದರ ಪುಷ್ಟೀಕರಣ ಮಾಡಿದ ಸಂಸ್ಕೃತ ಕನ್ನಡ ಭಾಷೆಗಳ ಜೋಡಣೆಯಿಂದಲೂ ತಜ್ಜನ್ಯ ಶ್ಲೇಷದಿಂದಲೂ ಪಾಠಕರ ಮನಸ್ಸಿಗೆ ಚಮತ್ಕೃತಿಯು ಹೊಳೆಯುವಂತೆ ಮಾಡಿ "ಪುರಾಣಮಿತ್ಯೇವ ನ ಸಾಧು ಸರ್ವಂ" ಎಂಬ ಕಾಲಿದಾಸನ ಉಕ್ತಿಯು ಯಥಾರ್ಥವಾಗುವಂತೆ ಮಾಡಿದರು.

ಸದ್ಯಃಕಾಲದಲ್ಲಿ ಕಾವ್ಯಶಬ್ದಕ್ಕೆ ವ್ಯಾಪಕಾರ್ಥವು ಬಂದಿರುವದು. ಸರ್ ರವೀಂದ್ರನಾಥ ಠಾಕೂರರವರು ವಂಗಭಾಷೆಯಲ್ಲಿ ಬರೆದ ಜಗತ್ಪ್ರಸಿದ್ಧ ಕಾವ್ಯಗಳು ಛಂದಸ್ಸಿನ ನಿಯಮಗಳಿಂದ ಬದ್ಧವಾಗಿಲ್ಲ. ಇದುವರೆಗೂ ಕಾವ್ಯಭಾಷೆಯು ಇಂಥದೇ ಎಂಬದು ನಿರ್ಣಯಿಸಲ್ಪಟ್ಟಿಲ್ಲ. ಕಾವ್ಯ ಮಾರ್ಗಕ್ಕಾದರೂ ಸ್ಥಿರತ್ವವು ಬಂದಿಲ್ಲ. ಆದ್ದರಿಂದ ಭಾಷಾಸೇವೆಯನ್ನು ಮಾಡಬೇಕೆಂದೆಣಿಸಿದ ಆಧುನಿಕ ಕವಿಗಳು ಹೊಸ ಹೊಸ ಕವಿತೆಗಳನ್ನು ರಚಿಸುವ ಕಾರ್ಯವನ್ನು ಯೋಗ್ಯತಾನುಸಾರವಾಗಿ ಕೈಕೊಳ್ಳಲಿಕ್ಕೆ ಬೇಕು.

ನಮ್ಮ ವಿದ್ಯಾರ್ಥಿಗಳಲ್ಲೊಬ್ಬರಾದ ಶ್ರೀಯುತ ಕುರಡಿಯವರು ರಚಿಸಿರುವ ಕವಿತಾ ಕುಸುಮ ಮಂಜರಿ ಎಂಬದು ಒಂದ ಕಾವ್ಯವು. ಈ ಚಿಕ್ಕ ಪುಸ್ತಕದಲ್ಲಿ ಏಳು ಭಾಗಗಳಿರುವವು. ಮೊದಲನೆಯ ಭಾಗದಲ್ಲಿ, ದೇವರನ್ನು ನೋಡುವದು ಮತ್ತು ದೇವರಿಂದ ವರವನ್ನು ಪಡೆಯುವದು ಎಂದರೆ ಏನೆಂಬ ಆಕಾಂಕ್ಷೆ (ಪ ೧—೪) ಪಾಪಪುಣ್ಯ, ನರಕಸ್ವರ್ಗ ಇವು ಕೇವಲ ಕಲ್ಪಿತವಾಗಿದ್ದು ಇವು ಅಜ್ಞಾನಿಗಳಾದ ಸಾಮಾನ್ಯ ಜನರಿಗೆ ಭೀತಿಯನ್ನೂ ಆಶೆಯನ್ನೂ ತೋರಿಸುವದಕ್ಕಾಗಿ ಹಿರಿಯರಿಂದ ಕಲ್ಪಿಸಲ್ಪಟ್ಟಿವೆ (ಪ ೫—೮) ಕೆಟ್ಟಕೆಲಸಗಳನ್ನು ಮಾಡಲಾಗಿ ಮನಸಿಗೆ ಆಗುವ ತಾಪವೇ ಪಾಪವು, ಸತ್ಕಾರ್ಯಗಳನ್ನು ಮಾಡುವದರಿಂದ ಮನಸಿಗಾಗುವ ಆನಂದವೇ ಪುಣ್ಯವು ಪಾಪಪುಣ್ಯಗಳ ಫಲಗಳಾದ ನರಕಸ್ವರ್ಗಗಳು ನಮ್ಮ ಮನಸಿನ ಹೊರಗೆ ಎಲ್ಲಿಯೂ ಇಲ್ಲ (ಪ ೯—೧೨) ಜಗತ್ತನ್ನು ಹುಟ್ಟಿಸಿ ಬೆಳಸಿ ಕೊಳ್ಳುವಂಥ ರೂಪಗುಣರಹಿತವಾದ ಶಕ್ತಿಯೇ ದೇವರು, (ಪ. ೧೨—೧೫) ಯುಕ್ತಿ, ಕವಲುಗಳಿಲ್ಲದ ಮನಸ್ಸಿನ ಆಸಕ್ತಿಯೇ ಭಕ್ತಿಯು, ಅದರಿಂದ ಮನಸ್ಸಿನಲ್ಲಿ ಶಕ್ತಿಸಂಗ್ರಹವಾಗಿ ಇಚ್ಛಾಶಕ್ತಿಯಿಂದ ಮನುಷ್ಯನು ದೇವರೆನ್ನುವ ಜಗತ್ತನ್ನು ತುಂಬಿದ ಶಕ್ತಿಯ ಸಂಗಡ ಐಕ್ಯತೆಯನ್ನು ಪಡೆಯುವನು (ಪ.೧೬—೨೦) ಇಚ್ಛಾಶಕ್ತಿಯ ಬೆಳುವಣಿಗೆಯೇ ಮೂರ್ತಿಪೂಜೆಯ ರಹಸ್ಯವು (ಪ. ೨೦—೨೨, ಲೋಕ ಸಂಗ್ರಹವೇ ಭೂತದಯೆಯ ಗುಟ್ಟು. (ಪ ೨೪—೨೫) ಎಂಬ ವಿಚಾರಗಳು ವಿವರಿಸಲ್ಪಟ್ಟಿವೆ

ಎರಡನೆಯ ಭಾಗದಲ್ಲಿ ದೂರದೃಷ್ಟಿ, ಅವಿವೇಕ, ಸ್ವಾರ್ಥಸಾಧನೆ, ಮುಖಸ್ತುತಿ, ಕೃತಘ್ನತೆ, ಸ್ವಾರ್ಥ, (ಪು. ೧೨—೧೪) ದೊಡ್ಡವರ ಮನಸ್ಸು, ಕಾರ್ಯಕ್ಷಮತೆ, ಮೂಢ ಅಹಂಕಾರ, ಸೃಷ್ಟಿಯ ನಿಯಮ, ಕೃತಿ ಮತ್ತು ಮಾತು, ಮೀರಿಹೋದ ಮಾತು, ಮರಣ, (ಪು. ೨೧—೨೨) ಎಂಬ ವಿಷಯಗಳ ಮೇಲೆ ಡಾ ರವೀಂದ್ರನಾಥ ಠಾಕೂರರವರ ಕವಿತೆಗಳ ಭಾವದ ಕವಿತೆಗಳಿವೆ.

ಮೂರನೆಯ ಹಾಗು ಐದನೆಯ ಭಾಗಗಳಲ್ಲಿ ವಸಂತಾಂತ್ಯದಲ್ಲಿಯ ಮಳೆ, ಪುಟ.೧೪.೧೫) ವಸಂತಾಂತ್ಯದಲ್ಲಿಯ ನಿದಾಗಮನ (ಪುಟ-೨೩-೨೪) ಎಂಬ ವಿಷಯಗಳ ಮೇಲೆ ಸೃಷ್ಟಿಯ ಸ್ವಭಾವ ವರ್ಣನಾತ್ಮಕವಾದ ಪದ್ಯಗಳಿವೆ.

ನಾಲ್ಕನೆಯ ಭಾಗದಲ್ಲಿ ಜನರ ಬಾಹ್ಯಾಚರಣೆಯನ್ನಾಗಲಿ, ವಸ್ತ್ರಾಲಂಕಾರಗಳನ್ನಾಗಲಿ ನೋಡದೆ ಅವರ ಅಂತರಂಗದ ಒಲವನ್ನೂ ಅದಕ್ಕೆ ಸಂಬಂಧಿಸಿದ ಅವರ ಕೃತಿಗಳನ್ನೂ ನೋಡಿ ಅವರ ಯೋಗ್ಯತೆಯನ್ನು ನಿರ್ಣಯಿಸಬೇಕೆಂಬ ತಾತ್ವಿಕವಿಚಾರವುಳ್ಳ ಕವಿತೆಗಳಿವೆ (ಪುಟ.೧೬)

ಆರನೆಯ ಭಾಗದಲ್ಲಿ ಜನರು ಅವಿವೇಕದಿಂದ ದನಗಳನ್ನು ಯಾವರೀತಿಯಾಗಿ ಪೀಡಿಸುತ್ತಾರೆಂಬದನ್ನು ತುಂಬಾ ಸ್ವಭಾವೋಕ್ತಿಯಿಂದ ವರ್ಣಿಸಿಒದುವವರ ಮನಸ್ಸಿನಲ್ಲಿ ಮೂಕಪ್ರಾಣಿಗಳ ವಿಷಯವಾಗಿ ಸಹಾನುಭೂತಿಯೂ ಭೂತದಯೆಯೂ ಬಿಂಬಿಸುವಂಥ ವಿಷಯವಿವೇಚನೆಯಿರುವದು(ಪುಟ. ೨೫-೨೮) ಏಳನೆಯ ಭಾಗದಲ್ಲಿ ಎರಡುಗಿಳಿಗಳ ವ್ಯಾಜೋಕ್ತಿಯಿಂದ ಜ್ಞಾನಿ, ಅಜ್ಞಾನಿ, ಪ್ರಾಪಂಚಿಕ, ಪಾರಮಾರ್ಥಿಕ, ಸ್ವತಂತ್ರರು, ಹಾಗು ಪರಾಧೀನರು, ಇವರ ಮನೋಭಾವಗಳೆಂಬ ದ್ವಂದ್ವಗಳಿಗೆ ಹೊಂದಿಕೆಯಾಗುವಂಥ ಅನೇಕಾರ್ಥವುಳ್ಳ ಉದಾತ್ತವಿಚಾರಗಳಿಂದ ಕೂಡಿದ ಡಾ. ರವೀಂದ್ರನಾಥರವರ ಕವಿತೆಗಳಭವಾನುವಾದವಿದೆ. (ಪುಟ-೨೯-೩೧) ಕೊನೆಗೆ ಗ್ರಂಥಕರ್ತನ ನಿರಿಚ್ಛಾದರ್ಶಕವಾದ ಈಶ್ವರಭಕ್ತಿಯ ವರ್ಣನೆಯಿರುವದು (ಪು—೩೨)

ಇಷ್ಟುಭಾಗಗಳನ್ನು ಒಳಕೊಂಡ ಈ ಖಂಡಕಾವ್ಯದಲ್ಲಿ ಹೊಸಹೊಸತರದ ಭಾವನೆಗಳೂ ವರ್ಣನಾಪ್ರಕಾರಗಳೂ ಮನೋಹರವಾಗಿಯೂ ಅಷ್ಟೇವಿಚಾರಕ್ಷಮವಾಗಿಯೂ ಇರುವವು. ಕಳೆದ ಎಷ್ಟೋ ವರ್ಷಗಳಿಂದ ಶ್ರೀಯುತ ಕುರಡಿಯವರು ಸರ್, ರವೀಂದ್ರನಾಥರವರ ಗೀತಾಂಜಲಿ ಮುಂತಾದ ಉತ್ಕೃಷ್ಟ ಕಾವ್ಯಗಳನ್ನು ಓದಿ, ಅವುಗಳ ಭಾಗಗಳನ್ನು ಪದ್ಯರೂಪದಲ್ಲಿ ಬರೆದು ಮಾಸಪತ್ರಿಕೆಗಳ ದ್ವಾರದಿಂದ ಕರ್ನಾಟಕದ ಸಹೃದಯರಾದ ವಾಚಕರ ಮುಂದೆ ಇಟ್ಟಿರುವರು. ಸರ್, ರವೀಂದ್ರನಾಥ ಠಾಕೂರರವರ ಉದಾತ್ತವಿಚಾರಗಳ ವಾಚನದಿಂದುಂಟಾದ ಸ್ಫೂರ್ತಿಯಿಂದ ಬರೆದ ಈ ಖಂಡಕಾವ್ಯದಲ್ಲಿ ಎಷ್ಟೋಉದಾತ್ತವಿಚಾರಗಳು ಪ್ರತಿಯೊಂದು ಭಾಗವಲ್ಲಿಯೂ ಗೋಚರವಾಗುವವು. ಆದರೆ ಶ್ರೀ. ಕುರಡಿಯವರ ಉದ್ದೇಶವು ತಾನೊಬ್ಬ ಉದ್ದಾಮ ಕವಿಯೆಂದು ಮಹಾಕವಿಗಳ ಕೂಡ ಸ್ಪರ್ಧೆಮಾಡುವೆನೆಂದು ಹೆಮ್ಮೆ ತೋರಿಸುವದು ಇರದೆ, ಸುಲಭವಾದ ಭಾಷೆಯಿಂದಲೂ ಸರಸವಾದ ಶೈಲಿಯಿಂದಲೂ ಗ್ರಂಥವನ್ನು ರಚಿಸಿ ಚಿಕ್ಕಮಕ್ಕಳ ನೀತಿಯನ್ನು ಸುಧಾರಿಸುವದು ಇರುವದರಿಂದ, ಈಶ್ವರಭಕ್ತಿ, ಭೂತದಯೆ ಮುಂತಾದ ವಿಷಯಗಳನ್ನು ಆರಿಸಿ ಪ್ರಾಚೀನರ ಕಠಿಣವಾದ ಮಾರ್ಗವನ್ನು ಹಿಡಿಯದೆ ಮಧ್ಯಕಾಲದ ಮಧ್ಯಸ್ಥಭಾಷೆಗಿಂತ ಬಹುಮಟ್ಟಿಗೆ ಭಿನ್ನವಾಗಿಯೂ ಪ್ರಚಲಿತಭಾಷೆಗೆ ಇನ್ನಿಷ್ಟು ಹೋಲುವಂತೆಯೂ ಇರುವ ಭಾಷೆಯನ್ನು ಉಪಯೋಗಿಸಿ ಈ ಚಿಕ್ಕ ಖಂಡಕಾವ್ಯವನ್ನು ರಚಿಸಿರುವರು. ಗ್ರಂಥವು ಚಿಕ್ಕದೆಂದು ಉಪೇಕ್ಷಿಸದೆ ಪಾಠಕರು ಒಮ್ಮೆಯಾದರೂ ಮನಮುಟ್ಟಿ ಈ ಕಾವ್ಯವನ್ನು ಓದಿದ್ದಾದರೆ ಅವರಿಗೆ ಕಾವ್ಯಪಠನದಿಂದಾಗುವ ಅನೇಕ ಪ್ರಯೋಜನಗಳು ನಿಃಸಂದೇಹವಾಗಿ ಆಗುವವೆಂದು ತುಂಬಾ ಭಾವಿಸುವೆವು.

ಧಾರವಾಡ ಟ್ರೇನಿಂಗ ಕಾಲೇಜ } **R. M. Mahishi,**

೧೧-೧೧-೧೯. } ಪ್ರಿನ್ಸಿಪಾಲ.



# ಹರಿಭಕ್ತಿಸಾರ.

## ಪೀಠಿಕೆ.

ಭಾ.ಷ. ಹರಿವ ನದಿಯೊಳು ಮಿಂದ ಮಾತ್ರಕೆ ।
ಹರಿಯುವದೆ ದುಷ್ಕೃತ್ಯದೋಷವು ? ।
ಹರಿಯು ಕಾಂಬನೆ ಬರಿಯ ಜಪತಪ ಹೋಮಹವನಗಳಿಂ ॥
ಉರುತರದ ಶುದ್ಧಾಂತರಂಗದಿ ।
ಸ್ಮರಿಸಿದಾಕ್ಷಣ ನಾಮಮಾತ್ರವ ।
ಹರಿಯು ಬರುವನು ಬೇಡು ಭಕ್ತನೆ ವರವನೆಂದೆನುತ ॥ ೧ ॥

ಗುರುವು ನುಡಿದೀ ನುಡಿಯನಾಲಿಸಿ ।
ತರಳನೊಬ್ಬನು ಬಾಲಭಾವದಿ ।
ಗುರುವರೇಣ್ಯರೆ, ನಿಮ್ಮ ಮಾತಿನ ಭಾವವೇನಿಹುದೋ ॥
ಅರಿಯೆನೈ ನೀಂ ಪೇಳಿರೆಲ್ಲವ ।
ಹರಿಯು ಕಾಣುವದೆಂದರೇನದು ? ।
ವರವನೀಯುವನಾತನೆಂತೀ ಕಲಿಯು ಕಾಲದಲಿ ॥ ೨ ॥

ಕಂದ, ನಿನ್ನಯ ಮಾತಿನಿಂದಾ ।
ನಂದವಾಯಿತು; ಕೇಳು ಪೇಳುವೆ ।
ನಿಂದು ವರಹರಿ ಭಕ್ತಿಸಾರವ ನಿನಗೆ ತಿಳಿವಂತೆ ॥
ಕಂದ ! ನೀಂ ತಿಳಿದಿರುವೆಯಲ್ಲವೆ ? ।
"ಚಂದದಿಂ ನೀನೊಂದು ಪಾಠವ ।
ನಿಂದು ಕಲಿತರೆ ಕೊಡುವೆನುಂಡೆಯ"ನೆಂಬ ಮಾತನ್ನು ॥ ೩ ॥

ಹೊಂದಿಸುತ ನೀನೋಡು ಮೇಲಣ ।
ಸಂದ ಧರ್ಮೋಕ್ತಿಯನು ನಿನ್ನಯ ।
ತಂದೆ ತಾಯ್ಗಳು ತೋರುವಾಶೆಯು ಚಿಕ್ಕ ನುಡಿಯೊಡನೆ ॥

ಮಂದಮತಿಗಳು ತಿಳಿಯಲಾರರು ।
ಎಂದೆನುತ ಬಹು ಗೂಢತತ್ವವ ।
ತಂದಿಹರು ಪೂರ್ವಜರು ತಾವೀ ಸುಲಭರೂಪಕ್ಕೆ ॥ ೪ ॥

ನೋಡದಲೆ ಫಲವನ್ನು ಕರ್ಮವ ।
ಮಾಡುವದು ಮೂಢರಿಗಸಾಧ್ಯವು ।
ಬೇಡುವರು ಫಲವನ್ನು ತತ್ಕ್ಷಣವವರು ಚಡಪಡಿಸಿ ॥
ನೋಡುತೀ ಕಷ್ಟವನು ಹಿರಿಯರು ।
ಹೂಡಿದರು ಬಹುದೊಡ್ಡ ಜಾಲವ ।
ಗೂಢವಾದಾ ಸ್ವರ್ಗ-ನರಕದ ಪುಣ್ಯ-ಪಾಪಗಳ ॥ ೫ ॥

ಮನಕೆ ಸಿಗ್ಗನಿಸದಿಹ ಕರ್ಮವ ।
ತನಗೆ ಸೇರಿದುದೆಂಬ ಭಾವದಿ ।
ಮನದಿ ಫಲದಾಶೆಯನು ತಾರದೆ ಗೈವುದಿದು ನೀತಿ ॥
ಜನರು ತಿಳಿಯುರಮೌಲ್ಯನೀತಿಯ ।
ನೆನುತ ಹಿರಿಯರು ಜೋಡಿಸಿದರೈ ।
"ನಿನಗೆ ಪಾಪವು ಬರುವದೆ'' ನ್ನುವ ಭೀತಿಭಾವನೆಯ ॥ ೬ ॥

ನೀತಿ ಭೀತಿಗಳೆಂಬ ಜೋಡಿಗೆ ।
ಆತುಕೊಂಡಿತು ಮುಂದಿನಾಶೆಯು ।
ಈತೆರವ ಮೂವಿಧದೆ ನಡೆವವು ಸಕಲಕರ್ಮಗಳು ॥
ನೀತಿಯನು ನೋಡುವರು ಪೂಜ್ಯರು ।
ಭೀತಿಯಲಿ ನಡೆಯುವರು ನೀಚರು ।
ಸೋತು ಸಕಲವ ಮುಂದಿನಾಶೆಗೆ ನಡೆವರುಳಿದವರು ॥ ೭ ॥

ಈಗ ಪೇಳಿದ ಪೂಜ್ಯವರ್ಗವ ।
ಯೋಗಿಗಳು ಜಗದೊಳಗೆ ದುರ್ಲಭ ।
ರಾಗಿಹರು ಕಲಿಮಹಿಮೆ! ಉಳಿದವರಲ್ಲಿ ಬಹುಜನರು ॥
ಆ ಗುಣೋತ್ತಮರಂತೆ ನೀತಿಯ ।
ಸೋಗುಗಳ ಕೈಕೊಂಡು ಮನದಲಿ ।
ನೀಗಲಾರದೆ ಫಲದೊಳಾಶೆಯ ಕರ್ಮವೆಸಗುವರು ॥ ೮ ॥

**ಈ** ಪರಿಯು ಫಲದಾಶೆಗೈವರಿ ।
ಗಾಪುರುಷರುಪದೇಶಗೈವರು ।
ಪಾಪತಾಪವ ನಾಶ, ಪುಣ್ಯದ ಲಾಭದಾಶೆಗಳ ॥

ಪಾಪವೆಂಬುದು ಲೋಕದಲಿತಾ ।
ರೂಪುಗೊಂಡಿಲ್ಲೈಯು! ಕಂದನೆ ।
ಪಾಪಕಾರ್ಯವಗೈಯೆ ಮನಕಹ ತಾಪವೇ ಪಾಪ ॥ ೯ ॥

**ಪು**ಣ್ಯ ಪಾಪಗಳಲ್ಲಿ ವೈಲ- ।
ಕ್ಷಣ್ಯವಿರುವದು ಸತ್ಯಕಂದನೆ ।
ಪುಣ್ಯಮನಕಾನಂದವೀವುದು ಪಾಪತಾಪಕರ ॥

ಪುಣ್ಯವಂತರಿಗಾಗಿ ದೇವರು ।
ಪುಣ್ಯಲೋಕವ ನಿರ್ಮಿಸಿಲ್ಲವು ।
ಪುಣ್ಯಕಾರ್ಯವಗೈಯೆ ಮನಕಹ ಶಾಂತಿಯೇ ಸ್ವರ್ಗ ॥ ೧೦ ॥

**ಪ**ರರಿಗುಪಕೃತಿಯಪ್ಪ ಕೃತಿಯನು ।
ಪರರನುತಿ ಸ್ವಾರ್ಥಂಗಳೆಣಿಸದೆ ।
ತಿರುಗಿಯುಪಕಾರವನು ಬಯಸದೆ ಮಾಡೆ ಪುಣ್ಯವದು ॥

ಪರರ ಮನವನನೀತಿಯಿಂದಲಿ ।
ಕೊರಗಿಸುವದೇ ಪಾಪಕಾರ್ಯವು ।
ನರಕವದರಿಂದುದ್ಭವಿಸುವದು; ಮನವ ನೋಯಿಪುದು ॥ ೧೧ ॥

**ನ**ರಕನಾಕಗಳೆಂಬವಿಲ್ಲವು ।
ನರರ ಹೃದಯವೆ ನಾಕನರಕಗ ।
ಳರಿತು ನಡೆವುದು ಕಂದ ನೀನೀಗೂಢತತ್ವವನು ॥

ಹರಿಯಕಾಣುವದೆಂದರೇನೆಂ ।
ದರಿವುದಕ್ಕೀ ಮಾತುಪೀಠಿಕೆ ।
ತರಳಪೇಳುವೆ ಮುಂದಿನಂಶವ ಕೇಳು ಭಕ್ತಿಯಲಿ ॥ ೧೨ ॥

## ದೇವರು.

ಎತ್ತಿಹಿಡಿದಿಹರಾರು ಭೂಮಿಯು ।
ಸುತ್ತಿಸುವರಾರದನು ಸೂರ್ಯನ ।
ಸುತ್ತಲೂ ಗರಗರನೆಯನುದಿನ ಗಳಿಗೆ ಬಿಡದಂತೆ ॥
ಬಿತ್ತಿರುವ ಬೀಜಗಳ ಮಳೆಯು ।
ನ್ನಿತ್ತು ಬೆಳಿಸುವರಾರು ಬೆಳಕನು ।
ಕತ್ತಲೆಯನಾರುಂಟುಮಾಡಿವರೆಮಗೆ ತಿಳಿಯುವದೇ ? ॥ ೧೩ ॥

ಹಾವಿಗಂತಹ ವಿಷವನೀಯುತ ।
ಗೋವಿಗಂತಹ ಸುಧೆಯು ನೀಡಿದ ।
ನಾವನೆಂಬುದ ಪೇಳಲಾಪೆಯು ಕಂದ ! ಕಠಿಣವಿದು ॥
ದೇವರೆನ್ನುವ ಮೂರುವರ್ಣಗ ।
ಳಾವ ಶಕ್ತಿಯು ತೋರಿಸುವವೋ ।
ಆವ ಶಕ್ತಿಯು ಜಗವ ಸೃಷ್ಟಿಸಿ ಬೆಳಿಸಿ ಕೊಲ್ಲುವದೋ ॥ ೧೪ ॥

ಭಕ್ತಿಯಿಂ ಕೇಳುವದು ಬಾಲನೆ ।
ಭಕ್ತ ವತ್ಸಲ ದೇವರೆನ್ನುವ ।
ಶಕ್ತಿಯೊಂದಿಹುದೀ ಜಗತ್ತಿನೊಳೆಂದು ನಂಬುವದು
ಭಕ್ತರಾದವರಿಷ್ಟ ಕಾರ್ಯಕೆ ।
ಶಕ್ತಿಯನು ಸಂಗ್ರಹಿಸಲೋಸುಗ ।
ಯುಕ್ತಿಯಿಂದಾ ಶಕ್ತಿಗಿತ್ತರು ಹಲವು ರೂಪಗಳ ॥ ೧೫ ॥

ರೂಪವೊಂದೇ ಸಾಲದೆಂದಾ ।
ರೋಪಿಸಿವರದರಲ್ಲಿ ಗುಣಗಳ ।
ರೂಪಗುಣಗಳ ಜೋಡಿಗಿತ್ತರು ಹಲವು ಹೆಸರುಗಳ ॥
ಈ ಪರಿಯು ನೂರೆಂಟು ನಾಮದಿ ।
ರೂಪಗುಣಗಳೊಳಡಗಿಕೊಂಡಿಹ ।
ಆ ಪರಮಶಕ್ತಿಯನು ಕಾಣಲು ಭಕ್ತಿಯೇ ಯುಕ್ತ ॥ ೧೬ ॥

## ಭಕ್ತಿ.

**ಹೊ**ತ್ತು ಹೊತ್ತಿಗೆ ಮೊಲೆಯನುಣಿಸುತ ।
ಎತ್ತಿ ಮುದ್ದಾಡುತ್ತ ಬೆಳಿಸುವ ।
ಹೆತ್ತ ತಾಯನು ಕಾಣದಿರೆ ನಿನಗಂದು ಮನದೊಳಗೆ ॥
ಎತ್ತ ನೋಡಿದಡತ್ತ ಕಣ್ಣಿಗೆ ।
ಕತ್ತಲೆಯೆ ಕಾಣಿಸಿತು ಬಾಲ್ಯದಿ ।
ಉತ್ತುಮನೆಯೀ ತಾಯ ಮೇಲಣ ಮಮತೆಯೇ ಭಕ್ತಿ ॥ ೧೭ ॥

**ಹ**ರೆಯದೊಳ್ ಪ್ರಿಯಪತ್ನಿಯೊಳ್ ಮನ ।
ಹರಿವು ತಿರುವದು, ಅನ್ನ ನೀರಿನ ।
ಪರಿವೆಯಿಲ್ಲವೆ ಕಷ್ಟನಷ್ಟಗಳೆಣಿಕೆಯಿಲ್ಲದಲೆ ॥
ಹರಿವ ನೀರಿನೊಳುರಿವ ಬೆಂಕಿಯೊ ।
ಳಿರದು ಭಯವದಕಿಂಥ ಕವಲುಗ ।
ಳಿರದ ತನ್ನಯ ಸತಿಯೊಳಿರ್ಪಾ ಪ್ರೇಮವೇ ಭಕ್ತಿ ॥ ೧೮ ॥

**ದು**ಡಿದು ಗಳಿಸಿದ ಹಣದ ರಾಶಿಯ ।
ಮಡದಿ ಮಕ್ಕಳ ಕೈಯೊಳಾವರು ।
ಕೊಡಲು ಮನವಿಲ್ಲದಲೆ ಕಾಯುವ ಮೂಢಮಾನವರ ॥
ದೃಢತರದ ಧನಲೋಭವೆಂಬುವ ।
ಬಿಡದ ಮನದಾಸಕ್ತಿಯೇ ಜಗ ।
ದೊಡೆಯ ಶಂಕರನೊಡನೆ ಘಟಿಸಲು ಭಕ್ತಿಯೆನಿಸುವದು ॥ ೧೯ ॥

**ಭ**ಕ್ತಿಯೆಂಬುದು ಬೇರೆಯಿಲ್ಲವು ।
ಯುಕ್ತಿ ಕವಲುಗಳಿರದ ಮನದಾ ।
ಸಕ್ತಿಯೇ ನಿಜಭಕ್ತಿಯದರಿಂ ತಮ್ಮ ಮನದೊಳಗೆ ॥
ಶಕ್ತಿ ಸಂಗ್ರಹವಾಗಿ ಇಚ್ಛಾ ।
ಶಕ್ತಿಯಿಂ ಜಗವನ್ನು ತುಂಬಿದ ।
ಶಕ್ತಿಯೊಡನೈಕ್ಯವನು ಪಡೆವುತ ಪಡೆವರಿಷ್ಟವನು ॥ ೨೦ ॥

## ಮೂರ್ತಿಪೂಜೆ.

**ಮ**ನದ ಬಯಕೆಯ ಪಡೆಯಲೋಸುಗ ।
ಘನಮಹಿಮ ಜಗದೇಕಶಕ್ತಿಗೆ ।
ತನಗೆ ಬೇಕಾಗಿರ್ದರೂಪವ ನಿತ್ತು ಪೂಜಿಸುತ ॥
ಮನದಿ ಭಾವಿಸುತಲದರ ಗುಣಗಳ ।
ತನಗೆ ಬೇಕಾದಂತೆಯೇ ಕಡೆ ।
ಗನುನಯದಿ ನಂಬುವನು ತನ್ನಾಧೀನವಾಯ್ತೆಂದು ॥ ೨೧ ॥

**ತ**ನಗೆ ವಶವಾಗಿರ್ದ ಶಕ್ತಿಯ ।
ತನಗೆ ಬೇಕಾಗಿರ್ದ ಕಾರ್ಯಕೆ ।
ಅನುಗೊಳಿಸಿ ಕಳುಹಿಸುವನಾತನು ಮನದ* ಬಲದಿಂದ ॥
ಮನದಿ ಹರಿಯಿಹನೆಂಬ ಮಾತಿದು ! ।
ಜನರು ಗೈಯುವ ದೇವತಾರಾ- ।
ಧನೆಯ ಗುಟ್ಟಿದು ! ಮಂತ್ರಶಾಸ್ತ್ರದ ಮೂಲತತ್ವವಿದು ! † ॥ ೨೨ ॥

**ಭಾ**ವವೇ ಬಲವೆಂಬ ಮಾತಿನ ।
ಭಾವವಿವರೊಳಗಿಹುದು ಬಾಲನೆ ।
ಭಾವಿಸದಿರನ್ಯಥಾ ! ನಂಬುತ ನಡೆವುದೀ ನುಡಿಯ ॥
ಆವನಿಚ್ಛಾಶಕ್ತಿಬಲಪಿಹು ।
ದಾವನಲಿ ತನುಮನವನಾಳುವ ।
ಭಾವದೈಕ್ಯತೆಯಿರುವದವನೇ ಭಕ್ತಪುಂಗವನು ॥ ೨೩ ॥

---

† ಪ್ರತಿಯೊಂದು ದೇವತಾರಾಧನೆಯ ಕಾರ್ಯದಲ್ಲಿಯೂ ಆವಾಹನೆ, ಅರ್ಚನೆ, ಧ್ಯಾನ, ಪ್ರಾರ್ಥನೆ ಎಂಬ ನಾಲ್ಕು ಮುಖ್ಯ ಅಂಗಗಳು ಇದ್ದೇ ಇರುವವು ಅಖಿಲ ಜಗದ್ವ್ಯಾಪಿಯಾದ ಈಶ್ವರೀ ಶಕ್ತಿಯನ್ನು ಇಚ್ಛಿತ ಆಕಾರದ ವಸ್ತುವಿನಲ್ಲಿ (ಮೂರ್ತಿಯಲ್ಲಿ) ಸಂಗ್ರಹಿಸುವದೇ ಆವಾಹನೆಯು; ಆ ಆವಾಹ್ನಿತ ದೇವತಾಶಕ್ತಿಗೆ ಭಕ್ತಿಯಿಂದ ಯಥಾಶಕ್ತಿ ಷೋಡಶೋಪಚಾರಗಳನ್ನು ಅರ್ಪಿಸಿ ಅದರಲ್ಲಿ ಅವಶ್ಯಕ ಗುಣಗಳನ್ನು ಆರೋಪಿಸಿ ಆ ಶಕ್ತಿಯ ಪ್ರಕಾಶಕ್ಕೂ ಪೂಜಕನಿಗೂ ಸಂಬಂಧವುಂಟಾಗುವಂಥ ಅನುಕೂಲ ಅವಸ್ಥೆಯನ್ನು ತಂದುಕೊಳ್ಳುವದೇ ಅರ್ಚನೆಯು. ಧ್ಯಾನವು ಶಕ್ತಿ ಸಂಗ್ರಾಹಕ ಕಾರ್ಯವು, ಅಂದರೆ ಆವಾಹ್ನಿತ ದೇವತಾಶಕ್ತಿಯೊಡನೆ ತಾದಾತ್ಮ್ಯವನ್ನು ಪಡೆಯುವದು, ಹಾಗು ಈ ರೀತಿಯಾಗಿ ಸಂಗ್ರಹಿಸಿದ ಶಕ್ತಿಯನ್ನು ಇಚ್ಛಿತಕಾರ್ಯದ ಸಾಧನೆಗೆ ನಿಯೋಗಿಸಿಕೊಳ್ಳುವದೇ ಪ್ರಾರ್ಥನೆಯು

* Will-Power

## ಭೂತದಯೆ.

**ಲೋ**ಕದಲಿ ನರರಿಷ್ಟ ಸಿದ್ಧಿಗೆ ।
ಏಕವಾಕ್ಯತೆಯಿಂದ ಪೇಳ್ದರು ।
ಲೋಕಸಂಗ್ರಹ ಶಕ್ತಿಸಂಗ್ರಹವೆಂಬ ಮಾರ್ಗಗಳ ॥
ಏಕಲಕ್ಷ್ಯದಿ ಶಕ್ತಿಸಂಗ್ರಹ ।
ವೇಕಲಕ್ಷ್ಯದೊಳಿಷ್ಟ ಸಾಧನ ।
ಲೋಕಸಂಗ್ರಹಕಾಗಿ ಹುಟ್ಟಿತು ಭೂತದಯೆ ಜಗದಿ ॥ ೨೪ ॥

**ಭೂ**ತದಯೆಯಿಂ ನಡೆವ ಮನುಜಗೆ ।
ಭೂತಗಳ್ ವಶವಾಗಿ ವರ್ತಿಸ ।
ಲಾತ ಪಡೆಯುವನಿಷ್ಟಸಿದ್ಧಿಯ ಲೋಕಸಂಗ್ರಹದಿ ॥
"ಭೂತದಯೆಯಿಂ ಪ್ರೀತನಾಗುವ ।
ಭೂತನಾಥನು" ಎಂಬ ಮಾತಿನೊ- ।
ಳೀ ತೆರದ ಗೂಢಾರ್ಥವಿಹುದೈ ಮುದ್ದು ಬಾಲಕನೇ ॥ ೨೫ ॥

### ತಾತ್ಪರ್ಯ

**ತ**ತ್ವವರಿಯುವ ಮೂರ್ತಿಪೂಜೆಯು ।
ಸತ್ವ ಹೀನರ ಭೂತದಯೆಯುಂ ।
ವ್ಯರ್ಥವಾಗುವವರಿತು ನಡೆವುದು ಕಂದ! ತತ್ವವನು ॥
ತತ್ವ ವಿವರಾದಂಥ ಮುನಿಗಳು ।
ಸತ್ವ ಶಾಲಿಗಳಾಗಿ ಮನಸಿನ ।
ಸತ್ವ ಬಲದಿಂ ಹರಿಯನೊಲ್ಪರು ವರವ ಪಡೆಯುವರು ॥ ೨೬ ॥






## ದೂರದೃಷ್ಟಿ.

ಭಾ ಷ ಕಲಕಲವನೆಬ್ಬಿಸಿತು ಕುಸುಮವು ।
"ಫಲವೆ, ಓ ನನ್ನ ಫಲವೇ ಬಾ ।
ಅಲೆಯುತಿರುವೆಯದೆಲ್ಲಿ?— ಅಹಹಾ! ಎನಿತು ದೂರದಲಿ" ॥
ಫಲವು ತಾನುತ್ತರವ ಪೇಳಿತು ।
ಹಲವು ರಗಳೆಯನೇಕೆ ಮಾಡುವೆ? ।
ನೆಲಸಿರುವೆನನುದಿನವು ನಿನ್ನೊಳು ದೃಶ್ಯರೂಪವಲಿ ॥ ೧ ॥

## ಅವಿವೇಕ

ಕೊಳವ ಹೊಕ್ಕಿತು ಕತ್ತೆಯೊಂದತಿ ।
ಕಳವಳಿಸಿ ನೀರಡಿಕೆಯಿಂದಲಿ ।
ಕೊಳದೆ ತಿರುಗುತಲೊದರಿತಹಹಾ! "ನೀರು ಕರಿದೆ"ನುತ ॥
ಕೊಳವು ಕೇಳಿದ ನಗುತಲೆಂದಿತು ।
"ಜಳವು ಕಪ್ಪಾಗಿಹುದು ಕತ್ತೆಗೆ ।
ತಿಳಿದು ನೋಡುವನರಿವನಿದರಾ ಶುಭ್ರಕಾಂತಿಯನು" ॥ ೨ ॥

## ಸ್ವಾರ್ಥಸಾಧನೆ.

ಅಡಗಿ ಮೆಲ್ಲಡಿಯಿಡುತ ಬರ್ಪುದು ।
ಅಡವಿಯೊಳು ತಾ ಕಾಳರಾತ್ರಿಯು ।
ಕೊಡುತ ಪುಷ್ಪಾದಿಗಳ ಪೋಪುದು ಸದ್ದು ಮಾಡದಲೆ ॥
ಒಡನೆ ಕುಸುಮಗಳೆದ್ದು ನುಡಿವವು ।
"ಒಡೆಯು ಸಂಧ್ಯಾಕಾಲ ನಿನಗಾವ್ ।
ಪೊಡಮಡುವೆವನುನಯದಿ ನೀನೆಮಗಿತ್ತೆ ವಿಕಸತೆಯ ॥

ಕೇಳುತೀ ನುಡಿಗಳನು ಸಂಧ್ಯಾ- ।
ಕಾಲ ಸಾಧಿಸತೊಡಗಿ ನುಡಿವುದು- ।
ಪೇಳಿದುದು ನಿಜ ನೀವು, ಸಂಶಯವಿಲ್ಲವೆಳ್ಳನಿತು ॥ ೩ ॥

## ಮುಖಸ್ತುತಿ.

ಬರಿಯ ಕೈಯಲಿ ನಗುತ ಮಮತೆಯು ।
ಬರಲು ಕೇಳ್ವುದು ತಾ ಮುಖಸ್ತುತಿ ।
"ದೊರಕಿಸಿಹೆ ನೀನೆಷ್ಟು ಭಾಗ್ಯವ"ನೆನಲು ಪೇಳುವದು ॥
"ಇರುವದೆನ್ನೊಡಲೊಳಗೆ ತೋರಲು ।
ಬರದು" "ನಾ ವ್ಯವಹಾರ ಚತುರನು ।
ಬರಗಿಕೊಳ್ಳುವೆನೆರಡು ಕೈಯೊಳು ದೊರಕಿದುದನೆಲ್ಲ" ॥ ೪ ॥

## ಕೃತಘ್ನತೆ

ಕೊಡಲಿಯೊಂದತಿದೈನ್ಯದಿಂದಲಿ ।
"ಗಿಡವೆ, ಕರುಣಿಸು ಸಣ್ಣ ಕಾವನು ।
ಒಡೆಯ, ಬೇಡೆನು ಹೆಚ್ಚ" ನೆನ್ನಲು ಗಿಡವು ದಯದಿಂದ ॥
ಕೊಡಲು ಕೊಡಲಿಯು ಕೊಂಡು ಕೂಡಲೆ ।
ಗಿಡವ ಕಡಿಯಲು ತೊಡಗಿತಹಹಾ !
ಗಿಡವು ನಡುಗಿತು ಬಿದ್ದಿತಾಗಲೆ ಬುಡವು ಮೇಲಾಗಿ ॥ ೫ ॥

## ಸ್ವಾರ್ಥ.

ಅರಳುತಿಹ ಕುಸುಮಗಳು ಮನದೊಳು ।
"ಪರಿಮಳವು ಪಾರುವದು ನಾಲ್ದೆಸೆ ।
ಗರರೆ ! ನಾವಿದ ಕಾಯಲಾರೆವು" ಎನುತ ಮರುಗುತಲಿ ॥
ಬೆರಳ ಸನ್ನೆಯೊಳುಸುರ ಕರೆಯಲು ।
"ಪರರ್ಗೆ ಕೊಡದಿರೆ ನಿಮ್ಮದಾಗದು ।
ಪರಿಮಳವು, ನಿಶ್ಚಯವು" ಪೇಳಿತು ಮಂದಮಾರುತವು ॥ ೬ ॥



# ವಸಂತಾಂತ್ಯದಲ್ಲಿಯ ಮಳೆಯು

ವೃ. ಷ **ಬಿ**ಸಿಲ ಬಲುತಾಪದಿಂ ಬಸವಳಿದ ಮನುಜರುಂ, ।
ಹಸುರು ನೆಲಮಂ ಕಾಣದರಸರಸಿ ಬೇಸರಿದು ।
ಹೊಸ ಚಿಗುರ ತಳೆದೊಡಂ ನಸುಬಾಡಿ ನಿಂತಿರ್ದಗಿಡದ ನೆಳಲಂ ಸೇರುತ ॥
ಬಿಸಿಯುಸುರ ಬಿಡುತಿರ್ಪ ದನಗಳುಂ ಕರುಗಳುಂ ।
ಎಸೆವಸಮ ನಸುನೀಲ-ವರ್ಣದಾಗಸವನುರೆ :
ಮುಸುಕುತಿರೆ ನೋಡಿ ಮೋಡಂಗಳಂ, ಘನಕೃಷ್ಣ
ವರ್ಣದಿಂದೊಪ್ಪುತಿರ್ಪ ॥ ೧ ॥

**ಅ**ಸಮಸಂತೋಷದಿಂ ನಲಿವುತಿರೆ ಭರದಿಂದ ।
ಹೊಸಮಳೆಯ ಪೇರ್ವನಿಗಳುದುರತೊಡಗಿದವಹಹ! ।
ದೆಸೆದೆಸೆಗಳೊಳು ಹೊಳೆಯೆ ಕೋಲ್ಮಿಂಚು ಜಗವ ನಡುಗಿಸುವಂತೆ
ಗುಡುಗುಜಡಿಯೆ॥
ಲಸದಮಲ-ವಜ್ರದಂತೆಸೆವಾಲಿಕಲ್ಗಳಾ ।
ಗಸದಿಂದಲುದುರುತಿರೆ ಬಾಲಕರು ಕಾಣುತದ ।
ನೊಸೆದು ಕುಣಿದಾಡಿ ಸವಿದರು, ಮನಸಿಗುರೆ ಸೊಂಪು ಕಣ್ಗಿಂಪು
ತಣ್ಪುಗೊಡಲು ॥ ೨ ॥

**ವ**ನವನಾವಳಿಗಳಂ ನಡುಗಿಸುವ ಬಿರುಗಾಳಿ ।
ಜನರಿಗುರೆ ಭೀತಿಯಂ ಬೀರುತ್ತ ಬೀಸುತಿರೆ ।
ವನಧಿಯೋ ಭೋರ್ಗರೆವ ಪರಿಯಾಯ್ತು; ನೀರುಂಡು
ಕಳೆಯೇರೆ ಸಕಲಜಗಕೆ ॥
ಘನತರದ ತಾಪದಿಂದುರೆ ಬೆಂದು ನೆರೆನೊಂದು ।
ಕನವರಿಸಿ ಬೇನೆಯಿಂದಳಲುತಿಹ ಬಳಲುತಿಹ ।
ಮನುಜನಾನಂದದಿಂ ಚಂದದಿಂ ನೋಳ್ಪನೀಬಿರುವಳೆಯ ಪೇರ್ವನಿಗಳ ॥೩॥

ಉರಿವ ಕೂರ್ಬೇಸಗೆಯ ತಾಪದಿಂ ಬರೆತಿರ್ದ ।
ಕೆರೆಗಳುಂ ತೊರೆಗಳುಂ ನೆರೆತುಂಬಿ ಹರಿವುತಿರೆ ।
ವರರಾಜಮಾರ್ಗಂಗಳೆಡಬಲದ ಕಾಲುವೆಗಳೊಳು
ನೀರು ಹೊರಸೂಸುತಿರಲು ॥

ನೆರೆಯ ನೆಲವೆಳೆಗರಿಕೆಯಿಂ ಮುಸುಕಿ ಹಸುರಾಗೆ ।
ನೆರೆಯ ಸಾಲ್ಗಿಡಗಳುರೆ ಮೆರೆಯೆ ಪೊಸ ತೇಜದಿಂ ।
ಕರದಿ ಛತ್ರವ ಪಿಡಿದು ಸಲೆಯುಡುಗಿ ಪಥಿಕರಾನಂದದಿಂ
ನಡೆವುತಿಹರು ॥ ೪ ॥

ಭರದಿಂದ ಸುರಿವ ಮಳೆಯಿಂ ಕಂಡು ಸಂತಸವ ।
ಭರದಿಂದ ಲೊಕ್ಕಲಿಗರಾಯುಧಂಗಳ ಕೊಂಡು ।
ಹೊರಟರು ಹೊಲಕೆ ಹಗಲನೊಗದೊಡನೆ ನಡೆಯುವೆಳೆಗೂಳಿಗಳ
ಜೋಡಿಗೂಡಿ ॥

ಹರುಷದಿಂ ಕೋಲೆತ್ತಿ ಬೆದರಿಸುತ ಗೂಳಿಗಳ ।
ತರತರದಿ ಹಾಡುತ್ತ ಬಿತ್ತಿದರು ಹೊಲಗಳನು ।
ವರಮಾತೆ ಭೂದೇವಿ ಸೊಗಸಾದ ಹಸುರುಡುಗೆಯನ್ನುಟ್ಟು
ಶೋಭಿಸಿದಳು ॥ ೫ ॥

ಸ್ಫುಟ.

ಛಾ ಸ ಕರಿಯ ಬಣ್ಣದ ಪಕ್ಷಿಯೊಂದನು ।
ಅರಿಯುವಲಿ ಕಲ್ಗೊಗೆದು ನಾನಿ- ।
ಷ್ಕರದಿ ಬೆದರಿಸೆ ಹಾರಿ ಹೋಯಿತು, ಕೂಗಿ, ಕಲರವದೆ ॥
ಅರರೆ! ಮೋಸವದಾಯಿತೆಂದಾಂ ।
ಕರೆದೆನ್ನೆ ಮರುದಿವಸವೊಂದನು ।
ಬಿರಿಮುದೆನ್ನಯ ಹೃದಯುವವರಾ ಕ್ರೂರ ಕಟು ರವದೆ ॥
ಕರಿಯ ಬಣ್ಣದಿ ಕಾಗೆ ಕೋಗಿಲೆ ।
ನೆರೆಯೊಳಿರುವವು ತಿಳಿಯದಂದದಿ ।
ಹರಿಯೆ, ನಿನ್ನಯ ಸೃಷ್ಟಿ ಚೇಷ್ಟೆಯನೆಂತು ಬಣ್ಣಿಪೆನು ॥

———



# ಸತ್ಪುರುಷ ಪರೀಕ್ಷೆ

ಭಾ. ಷ. ಒಂದು ದಿನ ವರವಾರಣಾಸಿಯೊ ।
ಳಿಂದುಶೇಖರ-ವಿಶ್ವನಾಥನ ।
ಮಂದಿರದ ಮುಂಗಡೆಯೊಳುದುರಿತು, ಹೊನ್ನಿನುರುಪದಕ ॥
ಚಂದದಿಂ ಬರೆದಿರ್ದರದರೊಳು ।
“ ಸಂದ ಸತ್ಕರ್ಮಗಳ ಗೈವವ ।
ಗಿಂದಿರೆಯು ವರನೊಲಿದು ಕಳುಹಿದನೀಮಹಾವರವ ” ॥ ೧ ॥

ನೆರೆದ ಭೂಸುರರಿದನು ಕಾಣುತ ।
ಭರದಿ ಸಾರಿದರೆಲ್ಲ ಕಡೆಯಲಿ ।
“ ಬರುವದಿಲ್ಲಿಗೆ ವರವಕೊಳ್ಳಲು ಯೋಗ್ಯರಾವವರು ॥
ನೆರೆವ ಸಭೆಯಲಿ ಪೇಳಿತಾವೆಸ ।
ಗುರುವ ಸತ್ಕಾರ್ಯಗಳ ಸರ್ವರು ।
ಪರಮಪೂಜ್ಯನ ನೋಡಿ ಕೊಡುವೆವು ವರವನೆಂ ” ದೆನುತ ॥ ೨ ॥

ಅರಿವುತೀಸೋಜಿಗದ ಸುದ್ದಿಯು ।
ಹರುಷವಲಿ ಬಹುಜನರು-ಮುನಿಗಳು, ।
ಪರಮಭಕ್ತರು, ಧರ್ಮನಿಷ್ಠರು, ಸುಕೃತ ಶಾಲಿಗಳು ॥
ತರತರವ ಬಿರುದಾಂತು ಮೆರೆಯುವ ।
ವರಮತಾಧಿಪರಾರ್ಯರರಸರು, ।
ಹರಿದು ಬಂದರು ವಾರಣಾಸಿಗೆ ತಾನು ತಾನೆನುತ ॥ ೩ ॥

ತಂಡ ತಂಡದಿ ಬರ್ಪ ಜನರನು ।
ಕಂಡು ಭೂಸುರವರರು ವರಸಭೆ ।
ಗೊಂಡು, ಕೇಳುತಲವರ ಕಾರ್ಯವ, ತಿರುಗಿ ಕಳುಹಿದೊಡೆ ॥
ಕಂಡು ಕಾಣದೆ ಮೋಹವಶದಿಂ ।
ಕೆಂಡವನು ಪಿಡಿವುತ್ತ ಮನದೊಳ ।
ಗಂಡಲೆವ ಕೀಟಕವ ತೆರವಲಿ ಮರುಗುತ್ತೈದಿವರು ॥ ೪ ॥

**ಸಂ**ದುಮಿೀಪರಿಯಿಂದ ವರುಷಗ ।
ಳೊಂದೆರಡು, ಬಳಿಕೊಂದು ದಿನ ತಾ ।
ಬಂದನಲ್ಲಿಗೆ ಪರಮ ಧಾರ್ಮಿಕನೆನಿಪ ಭೂವರನು ॥
ಸಂದ ಸಾಮ್ರಾಜ್ಯವನು ಧನವನು ।
ಮಂದಿ ಮಾರ್ಬಲವಾನೆ ಕುದುರೆಗ ।
ಳೊಂದುಳಿಯದಂದವಲಿ ದಾನವ ಮಾಡಿ ದೀನರಿಗೆ ॥ ೫ ॥

**ಬಂ**ದ ಭೂಪನ ಕಂಡು ಸಭಿಕರು ।
ವಂದಿಸುತ, "ಭೂವರನೆ, ನಿನ್ನಯ ।
ಸಂದ ಸದ್ಗುಣಗಣವ ನಿನ್ನಯ ದಾನ ಶೂರತೆಯ ॥
ಚಂದದಿಂ ಕೇಳಿಹೆವು ಕೊಳ್ಳೈ ।
ಇಂದಿರೆಯ ವರನಿತ್ತ ವರವನು" ।
ಎಂದೆನುತ ನೀಡಿದರು ಪದಕವನಾಮಹೀಪತಿಗೆ ॥ ೬ ॥

**ಪ**ರಮ ಧಾರ್ಮಿಕನೆನಿಪ ಭೂಪನು ।
ಹರುಷದಿಂ ಸಭಿಕರನು ವಂದಿಸಿ ।
ವರವ ಕೊಂಡನು, ನೋಡು, ನೋಡೀ ಮಹಾಚಮತ್ಕೃತಿಯ ॥
ವರ ಸುವರ್ಣದ ಪದಕವರಸನು ।
ಕರದಿ ಪಿಡಿವನಿತರೊಳು ತಟ್ಟನೆ ।
ಉರುಳಿ ಬಿದ್ದಿತು, ನೋಡೆ ಸಭಿಕರು, ಮಣ್ಣು ಹಂಚಾಯ್ತು ॥ ೭ ॥

**ಅ**ರರೆ! ಏನಚ್ಚರಿಯೊ! ಭೂಪನು ।
ಮರುಗಿ ಮನದೊಳು ಪ್ರೋಗಲಿತ್ತಲು ।
ತಿರುಗಿ ಪದಕವು ಮೊದಲಿಸಂತಾಯ್ತೀನ ಪೇಳುವೆನು ॥
ವರಮಹೀಸುರರೊಲಿದು ಕೊಟ್ಟಿರು ।
ವರವ ನೀಪರಿಯಿಂದ ಮೂವರಿ ।
ಗರರೆ! ಚೋದ್ಯವು! ಧಿಕ್ಕರಿಸಿತದು ಮೊದಲಿಸಂದದಲಿ ॥ ೮ ॥

ಈಯುವಧಿಯುಲಿ ಹಲವು ಕಡೆಯಿಂ ।
ಕಾಯುಕಷ್ಟವ ಮಾಡಲಾರದ ।
ರಾಯುವಿಲ್ಲದೆ ದೀನರಾಗಿಹ ಬಡಕುಟುಂಬಿಕರು ॥
ಬಾಯಿಯಿಲ್ಲದರಂಗಹೀನರು ।
ತಾಯಿಯುರಸುವ ಕರುವಿನಂದದಿ ।
ಜೀಯು! ದಯುಮಾಡೆನುತ ಬಂದರು ನಿಂದರಾಪುರದಿ ॥ ೯ ॥

ಜನರೊಳುರೆ ಕೀರ್ತಿಯನು ಪಡೆದಿಹ ।
ಘನಸುಶೀಲರು ವರವ ಪಡೆಯಲು ।
ಘನತರದ ಸಂಭ್ರಮದಿ ಬರುತಿರೆ ನೋಡುತಾ ಜನರ ॥
ಮನದಿ ಕನಿಕರವಿನಿತು ಮಾತ್ರವು ।
ಜನಿಸದಿರ್ದರು ಧನವ ಧಾನ್ಯವ ।
ಜನರು ಸೈ ಸೈಯೆನ್ನುವಂದದಿ ಸೂರೆಗೈಯುವರು ॥ ೧೦ ॥

ಇರುತಿರಲು, ವರವಿಶ್ವನಾಥನ ।
ದರುಶನಕೆನುತ ವಾರಣಾಸಿಗೆ ।
ಹೊರಟನೊಬ್ಬನು ತೊಳಲಿ ಬಳಲುತ ದೀನವೇಷದಲಿ ॥
ಅರಿಯುನವನೀ ವರದ ವಾರ್ತೆಯು ।
ನರಿಯು ನಾಡಂಬರದ ನಡತೆಯು ।
ಸೊರಗಿ ಸಣ್ಣಾಗುವನು ದೀನರ ದುಃಖವನು ನೋಡಿ ॥ ೧೧ ॥

ಒಂದು ದಿನ ಮಧ್ಯಾಹ್ನ ಸಮಯುದಿ
ಬಂದನಾತನು ವಾರಣಾಸಿಗೆ ।
ಸಂದ್ವ ವಿಶ್ವೇಶ್ವರನ ಮಂದಿರದೆಡೆಗೆ ಮುದದಿಂದ ॥
ಮಂದಿರದ ಸುತ್ತಲಿನ ಮಾರ್ಗದಿ ।
ನಿಂದಿಹರು ದುಃಖದಲಿ ಬಹುವಿಧ ।
ದಿಂದ ಗೋಳಿಡುವವನು ಕೇಳುತ ಮನದಿ ಮರುಗಿದನು ॥ ೧೨ ॥

ನೊಂದು ಮನದಲಿ ಮುಂದೆ ಬರುತಿರ ।
ಲೊಂದು ಕಡೆಯಲಿ ಬಹಳ ದುಃಖದಿ ।
" ತಂದೆಯೇ! ಕಣ್ಣಿಲ್ಲ, ಕುಂಟನು ಮೂರು ದಿನದಿಂದ ॥
ಒಂದು ಹಿಡಿ ಕೂಳಿಲ್ಲ, ಸಾಯುವೆ'' ।
ನೆಂದೆನುತ ಮೊರೆಯಿಡಲು ಕೇಳುತ ।
ಮುಂದಕಡಿಯಿಡಲಾರದಲೆ ತಾ ನಡೆದನವನೆಡೆಗೆ ॥ ೧೩ ॥

ಓಡುತೋಡುತ್ತಲ್ಲಿ ಗೈದುತ ।
ನೋಡುತಾತನ ತನುವ " ಕಂದನೆ, ।
ಮಾಡಲೇಂ ಕೊಡಲಾರೆನಿನ್ನವ ದೀನನಾಗಿಹೆನು ॥
ಬೇಡಿಕೊಳ್ಳೈ ಹರಿಯನಾತನು ।
ಮಾಡುವನು ಕರುಣೆಯನು, ಪೂರ್ವದಿ ।
ಮಾಡಿರುವ ಕರ್ಮಗಳ ಫಲವನು ಮೀರಲಾರಳವೂ " ॥ ೧೪ ॥

ಎನುತೆನುತ ಕಣ್ಣೀರ ಸುರಿಸುತ ।
ಮನದಿ ಕಳವಳ ಪಡುತಲಾತನ ।
ಸನುಮತಿಸುತ್ತೈದಿದನು ವಿಶ್ವೇಶ್ವರನ ಮಂದಿರಕೆ ॥
ಜನರ ಸಂದಣಿಯಲ್ಲಿ ತಾನತಿ ।
ವಿನಯದಿಂದೊಳಗೈದಿ ದೇವರಿ ।
ಗನುನಯದಿ ಪೊಡಮಟ್ಟು ಕಣ್ಣೀರಿಡುತ ಭಕ್ತಿಯಲಿ ॥ ೧೫ ॥

ಮರಳಿ ಬರುತಿರಲಲ್ಲಿ ನೆರೆದಿಹ ।
ವರ ಸಭಾಪತಿ ಕಂಡು ವಿನಯದಿ ।
ಕರೆವುತಾತನ ನಿತ್ತನವನಿಗೆ ವರದ ಪದಕವನು ॥
ಅರಿಯದಲದೇನೆಂಬುದಾತನು ।
ಕರದಿ ಪಿಡಿಯಲು, ಸಭಿಕರೆಲ್ಲರು,
ಹರುಷವಿಸ್ಮಯಗಳಲಿ ಬೆಪ್ಪಾಗಿರ್ದರೇಸೆಂಬೆ ॥ ೧೬ ॥

ಕರದಿ ಪಿಡಿಯಲು, ಪದಕವಾತನು ।
ಪರಮತೇಜಃಪುಂಜವಾಯಿತು ।
ಪರಸುವರ್ಣದ ವರ್ಣವುಜ್ವಲವಾಗಿ ಬೆಳಗಿದುದು ॥
ಭರದಿ ಸಭಿಕರು ಬಂದು ವಿನಯದೊ ।
ಳೆರಗಿ ಪೇಳಿದರಾಮಹಾತ್ಮಗೆ ।
ಪರಮ ಮಹಿಮನ ವರದ ಪೂರ್ವಾಪರ ವಿಚಾರಗಳ ॥ ೧೭ ॥
ತಾತ್ಪರ್ಯ

ನೋಡಿ ವಸ್ತ್ರಾಭರಣ ಕಾಂತಿಯ ।
ನೋಡಿ ಬಾಹ್ಯಾಚರಣೆ ನುಡಿಗಳ ।
ಮಾಡದಿರು ನಿರ್ಣಯವನೀಂ ಸತ್ಪುರುಷರಿವರೆಂದು ॥
ನೋಡು ಮೊದಲವರಂತರಂಗವ ।
ನೋಡು ಬಳಿಕಾ ಜನರ ಕೃತ್ಯವ ।
ಮಾಡದಿರು ನಿಂದೆಯನು ದೀನರ ಹೀನರಿವರೆಂದು । ೧೮ ॥

ಜಗವನಾಳುವ ಭೂಪ ಭೂಸುರ ।
ಸುಗುಣಿ ಸಜ್ಜನ ಸಾಧುಸಂತರ ।
ಅಗಣಿತದ ಬಹಿರಂಗ ಕೀರ್ತಿಯು ಸತ್ಯವಾಗಿರದೆ ॥
ಜಗದಿ ಜನಿಸಿದ ಸಕಲಮಾನವ ।
ಖಗಮೃಗಾದಿಗಳನ್ನು ಪ್ರೀತಿಸಿ ।
ಜಗದ ಪಾಲಕನಂತೆ ನಡೆವುದೆ ಪರಮಧರ್ಮವದು ॥ ೧೯ ॥






## ದೊಡ್ಡವರ ಮನಸ್ಸು.

**ಅ**ರಳುವವು ಕುಸುಮಗಳು ಸಣ್ಣವು ।
ಬಿರುಕಿನಲಿ ಗೋಡೆಗಳ ತೋಟದ ।
ಬಿರುದಿರದು ಹೆಸರಿರದು ನಗುವಾ ಪುಟ್ಟಪೂಗಳಿಗೆ ॥
ಎರಗಿ ನೋಡವು ಕ್ಷುದ್ರವೆಂದವು ।
ಮೆರೆವ ಪೂಗಳು ವನದಿ, ಗರ್ವದಿ ।
ಎರಗಿ ಕೇಳ್ವನು ಮೊದಲು ಸೂರ್ಯನು " ಕುಶಲವೇ ನಿನಗೆ " ॥

## ಕಾರ್ಯಕ್ಷಮತೆ

" **ನ**ನ್ನ ಕೆಲಸವನಾರು ಮಾಳ್ಪಿರಿ ।
ಬನ್ನಿರೆ"ಂದನು ತೆರಳ್ವ ಸೂರ್ಯನು ।
ಸನ್ನೆಯಿಲ್ಲದೆ ನಿಂತಿತೆಲ್ಲಾ ಜಗವು ಕೇಳಿದನು ॥
"ನಿನ್ನ ಕಾರ್ಯವ ನಾನು ಮಾಡುವೆ ।
ನನ್ನ ಶಕ್ತಿಯ ನೋಡಿ, ದೇವನೆ ।
ಮನ್ನಿಸೆ"ಂದಿತು ಮಣಿದು ಪಣತಿಯು ಮನೆಯ ಮೂಲೆಯಲಿ ॥

## ಮೂಢ ಅಹಂಕಾರ

**ಶ**ರವು ನೆನೆವುದು ತನ್ನ ಮನದಲಿ ।
"ಭರದಿ ಪಾರ್ವೆನು, ನಾ ಸ್ವತಂತ್ರನು ।
ಸರಿಯಲಾರದು, ಧನುವಿದೇನ್ನೈ, ಹಾರಲರಿಯದಿದು " ॥
ಅರಿವುತೀಮಾತುಗಳ ಕಾರ್ಮುಕ ।
ಪುರೆ ಜರೆದು ಪೇಳುವದು ನೀನರಿ ।
ತಿರುವೆಯಾ ? ಎಲೆ ಮರುಳೆ, ನಿನ್ನಯ ಗತಿಯು ಕಾರಣವ ॥

## ಸೃಷ್ಟಿಯ ನಿಯಮ.

" ಶಾಂತಿಯಿಲ್ಲದ ಸಾಗರವೆ ನೀ ।
ನೆಂತು ನುಡಿಯುವೆ ಮೇರೆಯಿಲ್ಲದೆ ? "
ಅಂತವಿಲ್ಲೀ ಪ್ರಶ್ನೆಗೆಂದಿತು ಮೊರೆವ ಸಾಗರವು ॥
" ಶಾಂತತೆಯಲೇನಿಹುದು ನಿಮ್ಮಯ ।
ಶಾಂತವಾಗಿಹ ಪರ್ವತಂಗಳೆ ? " ।
" ಅಂತವಿಲ್ಲೀ ಶಾಂತರೀತಿಗೆ " ದೊರಕಿತುತ್ತರವೂ ॥

## ಕೃತಿ ಮತ್ತು ಮಾತು.

ನುಡಿಯು ನುಡಿವುದು ಕೃತಿಯ ನೋಡುತ ।
" ನುಡಿಯಲಾರೆನು, ನೋಡಲಾರೆನು ।
ಒಡೆಯ ನಾಚುವೆ ಬರಿಯದಾಗಿಹ ಕ್ಷುದ್ರತನಕೆನ್ನ ॥
ನುಡಿಯೆ ನೀ ನುಡಿದ ನುಡಿನಿಜವ ।
ಲ್ಲಡಗಿಹುದು ನಿನ್ನೊಳಗೆ ಪೂರ್ಣತೆ ।
ಯಡಿಗಡಿಗೆ ಮರುಗುವೆನು ಮನಸಿನೊಳೆನ್ನಪೂರ್ಣತೆಗೆ " ॥

## ಮೀರಿಹೋದ ಮಾತು.

" ಕಳೆದುಹೋಯಿತು ಹಗಲು ! " ಎನ್ನುತ ।
ಕಳೆಯದಿರು ಕಣ್ಣೀರ ಕಷ್ಟದಿ- ।
ಅಳಲಿದರೆ ತಾ ಮರಳಿ ಬರ್ಪುದೆ ? ಕಳೆದ ದಿವಸವದು ॥
ಕಳೆದುಕೊಳ್ಳುವೆ ಮತ್ತೆ ರಾತ್ರಿಯ ।
ಬೆಳಗುತಿಹ ನಕ್ಷತ್ರಪುಂಜದ ।
ಬೆಳಕ ಸಹ ನೀನಿದನು ತಿಳಿದಿರು ಮಾನವೋತ್ತಮನೆ ॥

## ಮರಣ.

ಅಗಲುತಿಹ ಹಗಲನ್ನು ರಾತ್ರಿಯು ।
ನಗುತ ಸಲೆ ತಕ್ಕೈಸಿ ನುಡಿವುದು ।
ಮಗುವೆ ! ಬೆದರದಿರೆನಗೆ, ಮಾತೆಗೆ ಮೃತ್ಯುವೆಂದೆನುತ ॥
ತೆಗೆದುಕೊಂಬೆನು ನಿನ್ನನೆನ್ನೊಳು ।
ಸೊಗಸಿನುದಯವ ಕೊಡಲು ಬೇಗನೆ ।
ಸಿಗುವದದರಿಂ ನೂತನತ್ವವು ನಿನಗೆ ಬಹುಕಾಲ ॥



## ವಸಂತಾಂತ್ಯದಲ್ಲಿಯ ನಿಶಾಗಮನವು

ವಾ ಷ ಇಳೆಯು ಪೇರ್ಗಾವಿನಿಂ ಬಿಸಿಲಿನಿಂ ಸಲೆಬತ್ತಿ ।
"ಗುಳುಗುಳು" ನಿನಾದದಿಂ ಪರಿವುತಿಹ ಪೇರ್ದೊರೆಯು ।
ತಿಳಿಜಳವನೀಂಟಿ ಮುಖಮಂ ತೊಳೆದು, ಸಲೆದಣಿದ ಪಥಿಕರಾನಂದದಿಂದ ॥
ತಳಿತೆಸೆವ ತರುಗಳ ಸುಶೀತಲಚ್ಛಾಯೆಯೊಳ್ ।
ಕುಳಿತು ನಾನಾತರದ ಗೋಷ್ಠಿಯಿಂ ಚೇಷ್ಟೆಯಿಂ ।
ಕಳೆಯುತಿರೆ ಕಾಲಮಂ ರವಿಸಾರಿದಂ ಪಶ್ಚಿಮಾಗಸದ ಮೇರೆಯೆಡೆಗೆ ॥ ೧ ॥

ಇಳಿದಿಳಿದು ಪಶ್ಚಿಮಕ್ಷಿತಿಜಮಂ ಸಾರಿ ರವಿ ।
ಬೆಳೆಬೆಳೆದು ಕೆಂಪಾಗಿ ಪೊಂದಳಿಗೆಯಂದಮಂ ।
ತಳೆದು ಶೋಭಿಸಿದನೀಜಗವೆಲ್ಲ ನಗುವಂತೆ ತೋರಿ ಹೊಂಬಿಸಿಲಿನಿಂದ ॥
ಸುಳಿವ ನಸುಗಾಳಿಯಿಂದೇಳುತಿಹ ಬೀಳುತಿಹ ।
ಜಳನಿಧಿಯ ಘನನೀಲ ಜಲತರಂಗಗಳಲ್ಲಿ ॥
ಥಳಥಳಿಸಿ ಮಿನುಗಿದವು ರವಿಕಿರಣ, ನಡುನಡುವೆ ಮೀನುಗಳ್
ಸಿಡಿದುಬೀಳೆ ॥ ೨ ॥

ಬರುವ ನಿಶೆಯಂ ಕಂಡು ಗೋವಳರು ದನಗಳಂ ।
ಕರೆದು ಕೂಡಿಸಿ ಮುಂದೆ ಪೋಗುತಿರೆ ಕೋಲ್ವಿಡಿದು ।
ಕರಗಳಂ ನೆನೆನೆನೆದು ಕರೆಯುತಂಬಾಯೆಂದು ಗೋವುಗಳ್ ಬರುತಿರ್ದುವು ।
ಮರೆಯಾಗಿ ಹಿಂದುಳಿಯಲೊಂದು ಗಾಬರಿಯಾಗಿ ।
ಕರೆಯುತ್ತ ಕಾತಳಿಸಿ ನೋಡುತ್ತಲೋಡಿಬರೆ ।
ನೆರೆಯ ಶಾಲೆಯ ಬಿಟ್ಟು ಮನೆಗೆ ಪೋಗುವ ಬಾಲರಂಜಿ ಗಾಬರಿಗೊಂಡರು
॥ ೩ ॥

ಇರಲು ರವಿಬಿಂಬವರೆಮರೆಯಾಯ್ತು; ಮರೆಯಾಯ್ತು ।
ಕರಿದು ನಸುಗರಿದು ನೀಲಿ ಮೊದಲಾದ ವರ್ಣಂಗಳಿಂ ।
ಮೆರೆವ ಕಿರುಮೋಡಗಳ್ ದೂರದಿಂ ಪರ್ವತಾವಳಿಯಂತೆ ಕಾಣಿಸಿದವು

ಅರಿಯಾದ ರವಿಪೋಗೆ ಮೆಲ್ಲನೆ ನಿಶಾದೇವಿ ।
ಗಿರಿಗಹ್ವರದಿ ಪೊರಟು ಕಾರಡವಿಯಂ ದಾಂಟಿ ।
ಬರುವಳೋ ಬೈಲಿಗೆನೆ ಜಗವನೀಕ್ರಮದಿಂದ ಘೋರತಮವಾವರಿಸಿತು
॥ ೪ ॥

ದೂರದಿಂ ಕತ್ತಲೆಯ ವಲಯುಗಳ್ ಕ್ರಮದಿಂದ ।
ಸಾರಿಬರೆ ಹತ್ತಿರಕೆ ದಟ್ಟಾಗಿ ಕಪ್ಪಾಗಿ ।
ತೋರಿದವು ಗಿರಿ-ತರು ಮಹಾರಣ್ಯ-ನದಿಗಳೊಂದಾಗಿ-ಯಸ್ಪಷ್ಟವಾಗಿ ॥

ತೋರಲಾಗಸಕರಿಯ ಕೊಪ್ಪರಿಗೆಯಂದದಿಂ ।
ಮಾರಿನಾಚೆಯ ವಸ್ತು ಕಾಣದಿರೆ ಮೋಡದೊಳ್ ।
ತಾರಕೆಗಳಡಗಿರಲು ನಿಶಿಯು ಭೀಕರವಾಯ್ತು ಗಾಢಾಂಧಕಾರದಿಂದ ॥ ೫ ॥

## ಸ್ಫುಟ.

ಹೊಳೆವ ಮಾಣಿಕವೆನುತ ಮುದದೊಳು ।
ತಳುವದಲೆ ಬಾಗುತ್ತ ಪಿಡಿದೆನು ।
ಬಳಿಕ ಬಿಸುಟೆನು ನೋಡಿ ನಾನದ ಕೆಂಪು ಕಾಜೆನುತ ॥

ತುಳಿದೆನೈ ಗುಲಗುಂಜಿಯೆನ್ನುತ ।
ಬಿಳಿಯ ಮುತ್ತನು ಬೋಡಿ! ಮೂಢನು! ।
ತಿಳಿದು ಮಾಡುವದೇನು ? ಬಳಿಕಾಮುತ್ತಿನಂಶಗಳ ॥

ಅರಿಯದೀಜಡದೃಷ್ಟಿ ಸತ್ಯವ ।
ನರಿಯದೀಜಡಬುದ್ಧಿ ನಿತ್ಯವ ।
ಹರಿಯೆ ನಿನ್ನಯ ಸೃಷ್ಟಿ-ಚೇಷ್ಟೆಯನೆಂತು ಬಣ್ಣಿಪೆನು ॥

# ಮೂಕಪ್ರಾಣಿಯ ವಿಜ್ಞಾಪನೆ.

## (ಕರು)

ಭಾ ಷ **ಹು**ಟ್ಟಿದೆನು ಭೂಮಿಯಲಿ ಪೂರ್ವದಿ ।
ನೆಟ್ಟಿರುವ ದುಷ್ಕರ್ಮ-ವೃಕ್ಷದ ।
ಕೆಟ್ಟ ಹಣ್ಗಳ ತಿನ್ನಲೆಂದಾಂ ಕ್ಷುದ್ರಪಶುವಾಗಿ ॥
ಹುಟ್ಟಿದೆರಡನೆ ದಿನವೆ ನನ್ನಯ ।
ಕಟ್ಟಿದರು ಕೊರಳನ್ನು ಕಂಬಕೆ ।
ಕಟ್ಟಿದರು ಮೊಲೆಯುಂಬ ಬಾಯನು ಹೊರಗೆ ಬಿಡುವಾಗ ॥ ೧ ॥

**ದೂ**ರದಲಿ ಕಂಬಕ್ಕೆ ಬಿಗಿವುತ ।
ಬೀರಿ ನಾಲ್ಕೆಣ ಹುಲ್ಲ ಮುಂಗಡೆ ।
ಸಾರಿದನು ನಿಷ್ಕರುಣೆಯಿಂದಲಿ ಖೋಡಿ ಮಾನವನು ।
ಆರಿಗರುಹಲಿ ಎನ್ನ ಕಷ್ಟವ ।
ಹೀರಿದವು ರಕ್ತವನು ನೊಣಗಳು ।
ನೂರು ಜಾತಿಯ ನುಸಿಗಳುಣ್ಣೆಗಳಲ್ಲಿ ವಾಸಿಸುವ ॥ ೨ ॥

**ಕ**ಷ್ಟದಲಿ ಹೆತ್ತಮ್ಮ ಕರೆಯಲು ।
ಕಷ್ಟದಲಿ ಕೂಗಿದೆನು "ಅಂಬಾ!" ।
ದುಷ್ಟಬಾಲರು ಕೇಳುತನುಕರಿಸಿದರು ಮುದದಿಂದ ॥
ಅಷ್ಟರಲಿ ಮತ್ತೊರ್ವ ತರುಣಿಯು ।
ಭ್ರಷ್ಟೆ! ಬಿಚ್ಚಿದಳೆನ್ನ ಕೊರಳನು ।
ನಿಷ್ಠುರವನೇನೆಂದು ಪೇಳಲಿ! ದುಷ್ಟಮಾನವರ ॥ ೩ ॥

**ಕ**ರೆವತಾಯಿಯ ಬಳಿಗೆ ಪೋಗಲು ।
ತರದೆ ನೆಕ್ಕಿದಳೆನ್ನ ಬೆನ್ನನು ।
ಭರದೆ ಮೊಲೆಯುಣ್ಣಲ್ಕೆ ತೊಡಗಿದೆನಮಿತ ಮುದದಿಂದ ॥

ಅರೆಗಳಿಗೆ ನೋಡುತ್ತ ನಿಂತಾ ।
ತರುಣಿ, ರಾಕ್ಷಸಿ, ಹಿಡಿದಳೆನ್ನಯ ।
ಕೊರಳ ಹಗ್ಗವನೆಳೆದು ಕಟ್ಟಿದಳಮ್ಮನೆದುರಿನಲಿ ॥ ೪ ॥
ಕರುಣೆಯಿಲ್ಲದೆ ಹಿಂಡಿಯೆಳೆಯುವ ।
ತರುಣಿಯ ಕರಾಘಾತದಿಂದಲಿ ।
ಸೊರಗಿಸುತ ಕೆಚ್ಚಲವ ಬಾಲವ ಬೀಸಿದಳು ಮಾತೆ ॥
ತರುಣಿ ಬಾಲವು ಮುಖಕೆ ತಾಗಲು ।
ಹಿರಿದು ಬಡಿಗೆಯ ಕೋಪದಿಂದಲಿ ।
ಅರರೆ! ಬಡಿದಳು, ದುಷ್ಟೆ! ಬೆನ್ನಿನ ಹುರಿಯು ಮುರಿವಂತೆ ॥ ೫ ॥
ಸೃಷ್ಟಿಕರ್ತನು ತಾಯ ಮೊಲೆಯಲಿ ।
ಸೃಷ್ಟಿಸಿರುವಾಹಾರವನು ಕಡು— ।
ದುಷ್ಟಮಾನವರಪಹರಿಸುತಿರಲುಕ್ಕಿ ಬರುತಿರುವಾ ॥
ಕಷ್ಟವನು ಗಂಟಲಲಿ ನುಂಗುತ ।
ಸೃಷ್ಟಿಕರ್ತನ ಬೇಡಿಕೊಂಡೆನು ।
"ನಿಷ್ಠೆಯುಳ್ಳರ ಪಾಲಕನೆ ನೀನೀಡೊ ಮೋಕ್ಷವನು" ॥ ೬ ॥

(ಗೂಳಿ)

ಪರಮ ಕರುಣಾವನಧಿ ದಯದಿಂ ।
ಕರುಣಿಸಿದ ಮೊಲೆಹಾಲ ದುಷ್ಟರು ।
ಕೊರಳ ಬಿಗಿದಪಹರಿಸಿಕೊಂಡರು, ಭೂಮಿತಾಯಿತ್ತ ॥
ನರರು ತಿನ್ನಲು ಬಾರದಂತಹ ।
ಕರಿಕೆ ಮೊದಲಾಗಿರ್ದ ಹುಲ್ಲಗಳ ।
ಕರಕರನೆ ಮೇಯುತ್ತ ಕಳೆದೆನು ನಾಲ್ಕು ವರುಷಗಳ ॥ ೭ ॥
ಇದ್ದುದನು ಪರರೊಯ್ಯೆ ದುಃಖದಿ ।
ಬಿದ್ದು ಬಿದ್ದಳುವಂಥ ಮಾನವ ।
ಬುದ್ಧಿಗೇಡಿಗಳಂತೆ ನಾನಳಲಿಲ್ಲ ತಿರುತಿರುಗಿ ॥
ಮುದ್ದು ಮಗುವಿನ ತುತ್ತ ಕಸಿದರು ।
ಕ್ರುದ್ಧಳಾಗದೆ ದುಃಖಮಾಡದೆ ।
ಬುದ್ಧಿಗಲಿಸೈ ದೇವ ನರರಿಗೆ ಯೆಂದಳೆನ್ನಮ್ಮ ॥ ೮ ॥

**ಹಾ**ಲು ಸಿಗದಿರೆ ಹುಲ್ಲಿನಿಂದಲೆ ।
ಕಾಲ ಕಳೆದೆನು ಸೊಕ್ಕಿ ಬೆಳೆದೆನು ।
ಮೇಲು ಕೀಳೆಂದೆಂಬ ಭಾವವ ಮನದೆ ತರಲಿಲ್ಲ ॥
ಕಾಲಕಾಲಕೆ ದೇವನೆನ್ನಯ ।
ಪಾಲಿಗೀಯುವ ಕೆರೆಯ ನೀರೇ ।
ಹಾಲೆನುತ ಕುಡಿದಿರ್ದೆ ಕೆಲದಿನ ಶಾಂತಮನದಿಂದ ॥ ೮ ॥

**ತುಂ**ಬಿ ನಾಲ್ಕನೆ ವರುಷ ಮೈಕ್ಕೆ ।
ತುಂಬಿ ಬೆಳೆದೆನ್ನನ್ನು ನೋಡುತ ।
ತುಂಬೆಗಣ್ಣಿನ ಕರಿಯ ಗೌಡನು ಪೇಳ್ದನೀ ನುಡಿಯ ॥
"ತುಂಬಿ ಬಂತಿದಕೀಗ ಹರೆಯವು ।
ಹುಂಬತನದಿಂ ಬೆಳೆಸಲಾಗದು ।
ಹಂಬಲಿಸಿ ಯೆನ್ನೊಡೆಯ ನೀವೀ ವಾತನಿನ್ನೊಮ್ಮೆ" ॥ ೧೦ ॥

**ಅ**ರರೆ! ಏನಿದು ಗೌಡನಾಡಿದ ।
ಅರೆನುಡಿಯ ತಾತ್ಪರ್ಯವೆನ್ನುತ ।
ತಿರು ತಿರುಗಿ ಮನದೊಳಗೆ ಯೋಚಿಸುತಿರ್ದೆನೆರಡುದಿನ ॥
ಮರುದಿನವೆ ನಾಲ್ಕೈದು ಹುಂಬರು ।
ಕರಿಯ ಕಂಬಳಿಯೊಡನೆ ಬಂದರು ।
ಥರಥರನೆ ನಡುಗಿದೆನು ನೋಡುತಲವರ ರೂಪವನು ॥ ೧೧ ॥

**ಒ**ಡೆಯನಾಜ್ಞೆಯ ಪಡೆದು ಕೈಯೊಳು ।
ಹಿಡಿದು ಹಗ್ಗವ ಬಂದರೆನ್ನಯ ।
ಬಡಿದು ಬೆನ್ನನು ಹಗ್ಗವಿಕ್ಕುತ ಬಿಗಿದು ಕೆಡಹಿದರು ॥
ಕಡು ದುರಾತ್ಮರು ಕೊಲ್ವರೆನ್ನುತ ।
ಚಡಪಡಿಸುತೊದ್ದಾಡಿ ಚೀರಿದೆ ।
ಕಡೆಗೆ ಹರಿಯೇ ! ಪಾಲಿಸೆಂದೆನು ಬಿದ್ದು ಬಿಸುಸುಯ್ದು ॥ ೧೨ ॥

**ಹ**ರಹರಾ ! ಕ್ರೂರಾತ್ಮನೊಬ್ಬನು ।
ಕರದಿ ಪಿಡಿದತಿ ಕಾಯ್ದ ಸಳೆಯಿಂ ।
ಚರಚರನೆ ಸುಡುತೆನ್ನ ಮೂಗನು ಸುರಿದು ಹಗ್ಗವನು ॥
ಸರಿದು ನಿಂತನು ದೂರ "ಅಂಬಾ !"
ಕರೆಕರೆದು ಕಣ್ಣೀರನತ್ತೆನು ।
ಸರಿದರೆಲ್ಲರು ಬಿಡಿಸಿ ಕಾಲ್ಗಳ ಕೂಗಿದೆನು "ಅಂಬಾ !" ॥ ೧೩ ॥

**ಪೇ**ಳಿತೀರದ ನೀಚಕೃತ್ಯವ ।
ಪೇಳಲೆನಗೇ ಬಹುದು ನಾಚಿಕೆ ।
ಖೂಳ ಮಾನವರೆನ್ನ ಪಾಲಕರೆನಿಸಿ ಗೈದುದನು ॥
ಕೇಳುವವರಾರೆನ್ನ ? ಮೋಕ್ಷವ ।
ಪಾಲಿಸುವ ನೀನೊಬ್ಬನಲ್ಲದೆ ।
ಕಾಳಿಮರ್ದನ ಹರಿಯೆ ! ಕೆಡಿಸಿದರೆನ್ನ ಪೌರುಷವ ! ! ॥ ೧೪ ॥

(ಎತ್ತು.)

**ಉ**ತ್ತಮೋತ್ತಮ ಮನುಜ ಜನ್ಮವ ।
ನಿತ್ತ ನಿನ್ನನು ಮರೆತ ಮಾನವ ।
ರಿತ್ತ ಕಷ್ಟವನೆಷ್ಟೆನುತನಾ ಬಣ್ಣಿಸಲಿ ಹರಿಯೇ ! ॥
ಎತ್ತು ಕತ್ತೆಗಳಾಗಿ ಜನ್ಮವ ।
ನೆತ್ತಿ ಸಲಿಸಲಿ ಋಣವನೆಂದಾ ।
ಡುತ್ತಿರುವ ನುಡಿಯೊಂದರಿಂದಲೆ ತಿಳಿವುದವರೊಲವು ॥ ೧೫ ॥

**ಹ**ಗಲಿರುಳು ಹಸಿವೆಗಳನೆಣಿಸದೆ ।
ಹೆಗಲನೊಗವನ್ನಿಳುಹದಂದದಿ ।
ಮಿಗೆ ದುಡಿದು ಮುಪ್ಪಡಸೆ ಕಟುಕಗೆ ಮಾರುವರು ಮುದದಿ ॥
ಜಗದೊಡೆಯ ನೀನಿರ್ಮಿಸಿರುವೀ ।
ಜಗದಿ ನೀತಿಯಿದೇನು ? ಕರುಣಿಸು ! ।
ಬಗೆಯು ಬೇರೊಂದರಿಯೆ ! ಮೋಕ್ಷವನೀಡು ! ಉದ್ಧರಿಸು ॥ ೧೬ ॥

## ಎರಡು ಗಿಳಿಗಳು. *

**ಇ**ಳೆಯನಾಳುವ ನೃಪನ ಮಂದಿರ ।
ದೊಳಗೆ ಮೇಲುಪ್ಪರಿಗೆಯಲಿ ಸಲೆ ।
ತೊಳಗುತಿಹ ಕಿರುಮನೆಯ ಮುಂಗಡೆ ತೂಗಗಟ್ಟಿರುವ ॥

ಥಳಥಳಿಸಿ ಹೊಳೆಯುತಿಹ ಬೆಳ್ಳಿಯ ।
ಸಳಿಯ ಪಂಜರದಲ್ಲಿ ಕುಳಿತಿಹ ।
ಗಿಳಿಯ ಸಿಳ್ಳಿನ ಮಧುರತರದಾಲಾಪವನು ಕೇಳಿ ॥ ೧ ॥

**ಭ**ರದೆ ಹಾರಾಡುತ್ತ "ಕಿಲಕಿಲ" ।
ಸರದೊಳಾನಂದವನು ಬೀರುತ ।
ವರಶುಕವದೊಂದಲ್ಲಿ ಒಂದಿತು ಕುಳಿತಿತೆದುರಿನಲಿ ।

ಕಿರುನಗೆಯೊಳಾದರಿಸಿ "ಮಿತ್ರನೆ ।
ದರುಶನವನೆನಗಿತ್ತೆ ಬಾಲ್ಯವ ।
ಮರೆಯದಲೆ ಬಾರೊಳಗೆ" ನುಡಿಯಿತು ಪಂಜರದ ಶುಕವು ॥ ೨ ॥

ಹೊರಗಿನ ಗಿಳಿ ( ಅವಸರದಿಂದ ) —

**ಗೆ**ಳೆಯ ಬಾರೈ ಹೊರಗೆ ಬೇಗನೆ ।
ಸೆಳೆಯ ಪಂಜರದಲ್ಲಿಯನುದಿನ ।
ಕೊಳೆಯಲೇತಕೆ ವನಕೆ ಪೋಗುವ ಮುದದಿ ಹಾಡುತ್ತ ॥

ಸೆಳೆಯ ಬಾಗಿಲ ಮುಚ್ಚದಲೆ ತಾ ।
ನುಳಿದಿಹುದೊ ನೋಡಲ್ಲಿ ದೈವದೆ ।
ಗೆಳೆಯ ದೊರೆದರೆ ಸಂಧಿ ಬಾ! ಬಾ! ಹಾರಿಹೋಗೋಣ ॥ ೩ ॥

* ಈ ಕವಿತೆಗಳು ಲೋಕಪ್ರಸಿದ್ಧ ಕವಿಗಳಾದ ಸರ್ ರವೀಂದ್ರನಾಥ ಠಾಕೂರರವರ ಕೆಲವು ಕವಿತೆಗಳ ಭಾವವನ್ನು ಸಂಗ್ರಹಿಸಿ ರಚಿಸಲ್ಪಟ್ಟಿವೆ

ಹೊರಗೆ ಕುಂಬಿಯ ಮೇಲೆ ಕುಳಿತಿಹ ।
ಪರಮ ಮಿತ್ರನ ಮಾತ ಕೇಳುತ- ।
ಲರಗಿಳಿಯು ಮುದದಿಂದ ಪೇಳಿತು “ ಗೆಳೆಯ ಬಾರೊಳಗೆ ” ।

ಹೊರಗಿನ ಗಿಳಿ ( ಅಸಮ್ಮತಿಯನ್ನು ತೋರಿಸಿ ):—

ಬರಲು ಮನವೆನಗಿಲ್ಲನಾ ಪಂ ।
ಜರಕೆ ಪಕ್ಕವ ಬಿಚ್ಚಿ ಹಾರಲು ।
ಬರುವದೇ ನಿನಗಲ್ಲಿ? ಬಂಧನ! ಕಷ್ಟ! ಬಹುಕಷ್ಟ! ॥ ೪ ॥

ಪಂಜರದ ಗಿಳಿ ( ದುಃಖದಿಂದ ):—

ಕಷ್ಟವೆನಿಸುವದೇಕೆ? ನಿನಗುತ್ ।
ಕೃಷ್ಟವಾದೀ ಪಂಜರವು ಭಲೆ!
ಕಷ್ಟವೆನಿಸದೆ ಬರಿಯದಾದಾಕಾಶದಲಿ ನಿನಗೆ ॥
ಕಷ್ಟವೆನಿಸುವವೆನಗೆ ನಿನಗತಿ ।
ಇಷ್ಟವೆನಿಪಾಕಾಶವದರೊಳ್ ।
ಕಷ್ಟವಕಟಾ! ಸ್ಥಾನವೆಲ್ಲಿದೆ ಕುಳ್ಳಿರಲು ನಮಗೆ ॥೫॥

ಹೊರಗಿನ ಗಿಳಿ ( ನಿಟ್ಟುಸುರು ಬಿಟ್ಟು ).—

ಪರಮ ಹರುಷವನೀವರಣ್ಯದ ।
ಸಿರಿಯು ನೋಡಲು ಮನವ ಕರಗಿಸಿ ।
ಬೆರಗುಗೊಳಿಸುವದದನು ಹಾಡೈ ಹಾಡು ಮುದದಿಂದ ॥

ಪಂಜರದ ಗಿಳಿ ( ಅಭಿಮಾನದಿಂದ ).—

ಅರಮನೆಯ ಮೇಲುಪ್ಪರಿಗೆಯಲಿ ।
ಮೆರೆಯುವೀ ಪಂಜರಕೆ ಬಂದರೆ ।
ತ್ವರದೆ ಕಲಿಸುವೆ ನಿನಗೆ ನಾ ಪಂಡಿತರ ಸವಿನುಡಿಯ ॥ ೬ ॥

ಹೊರಗಿನ ಗಿಳಿ ( ಅನಾದರದಿಂದ ).—

ಬರಮು! ತಿಳಿಯದು ಕಲಿಸಿದರೆ ತಾ ।
ನರರೆ! ಸೃಷ್ಟಿಯ ಸಹಜ ಸೌಖ್ಯದ ।
ಸಿರಿಯು ಕಲ್ಪನೆ ನಿಜವನರಿಯದೆ ಪಡೆಯುದನುಭವವ ॥

ಪಂಜರದ ಗಿಳಿ ( ತುಂಬಾ ದುಃಖದಿಂದ ):—

ಅರರೆ! ನಾ ಕಂಡಿಲ್ಲವಡವಿಯು ।
ಸಿರಿಯು ಸೌಖ್ಯವನೆಂತು ಹಾಡಲಿ ? ।
ಅರಿಯೆನದನೆಂತಿಹುದೊ ಮಿತ್ರನೆ ಮನದೆ ಮರುಗದಿರು ॥ ೭ ॥

ಮನದೊಳುಭಯತರಲ್ಲಿ ತುಂಬಿದೆ ।
ಯನುಪಮುದಸತ್ ಪ್ರೇಮ ಸತ್ಯವು ।
ಮನದೊಳವು ಬಯಸುವವು ಕೂಡಿರಲಿಕ್ಕೆ ನಿಶ್ಚಯವು ॥
ಮನದೊಳಿಚ್ಛೆಯು ನಿಂತು ತಳೆದಾ ।
ಕ್ಷಣಕೆ ಫಲವದರಿಂದಲೇನರ।
ಮನೆಯ ಶುಕ ಹೊರಗೈದಲಾರದು ಹೊರಗಿನದು ಪೊಗಗೆ ॥ ೮ ॥

ಒಳಗೆ ಪಂಜರದಲ್ಲಿ ಕುಳಿತಿಹ ।
ಗಿಳಿಯು ಹೊರಗಿನದನ್ನು ನೋಡಲು ।
ತಿಳಿಯಲಾರ್ಪುವೆ ಮನದ ಗುಟ್ಟನು ? ವ್ಯರ್ಥವವರಿಚ್ಛೆ ॥
ಗೆಳೆಯ, ಮಿತ್ರನೆ, ಬಾರ ! ಬಾರ್ರೈ ।
ಬಳಿಗೆ ಬಾರ್ರೈ ! ಎನುತ ಮನದೊಳು ।
ಕಳವಳಿಸಿ ನುಡಿಯುತ್ತ ದಣಿವವು ಹುಡುಕಿ ದಾರಿಯನು ॥ ೯ ॥

ಹೊರಗಿನ ಗಿಳಿ ( ತಿರಸ್ಕಾರಯುಕ್ತ ಸ್ವರದಿಂದ ) —

ಪಂಜರದ ಬಾಗಿಲವ ನೋಡಲು ।
ಅಂಜಿಕೆಯು ಬಹುದೆನಗೆ ಮಿತ್ರನೆ ।
ಪಂಜರದೆ ಬರಲೆನಗಸಾಧ್ಯವು ನಿನ್ನ ಸಹವಾಸ ॥

ಪಂಜರದ ಗಿಳಿ ( ದುಃಖದಿಂದ ಕುಂಠಿತವಾದ ಕಂಠದಿಂದ ) —

ಅಂಜುವೆನು ಬರೆಲಾರೆ ಬೈಲಿಗೆ ।
ಪಂಜರದೊಳಿರೆ ಶಕ್ತಿಹೀನತೆ ।
ಸಂಜನಿಸಿ ನಿರ್ಜೀವವಾಗಿವೆಯೆನ್ನ ಪಕ್ಕಗಳು ॥ ೧೦ ॥





## ಆತ್ಮಸಮರ್ಪಣೆ.

ಭಾ. ಷ. **ತಂ**ದೆತಾಯ್ಗಳು ನೀನೆ; ಮಮತೆಯ ।
ಬಂಧು ಬಳಗವು ನೀನೆ; ನೀನೇ- ।
ಸಂವ ಧನಕನಕಗಳು ಸಕಲವು ಲೋಕನಾಯಕನೆ ॥
ಜೆಂಪುದೆನ್ನಯ ಹೃದಯ, ಬಹುವಿಧ- ।
ದಿಂವ ಬಳಲಿದೆನೀ ಪ್ರಪಂಚದಿ ।
ಬಂಧನವ ಪರಿಹರಿಸಿ ರಕ್ಷಿಸೊ! ಜನನ ಮರಣಗಳ ॥ ೧ ॥

**ಅ**ರಿಯೆನ್ನೈ ಸತಿಸುತರ ಬಾಂಧವ ।
ರರಿಯೆನ್ನೈ ಗೃಹವಾಸ ಸೌಖ್ಯವ ।
ನರಿಯೆನ್ನೈ ವನವಾಸ ಜಪತಪಹೋಮಹವನಗಳ ॥
ಹರಿಯೆ ! ನಾನಲ್ಲಯ್ಯೊ ! ಭೋಗಿಯು ।
ಪರಿಯುನರಿಯೆನು ಯೋಗಿವರ್ಯರ ।
ಅರಿಯುದೆಯೆ ಮರೆಹೊಕ್ಕೆ ಮಾರ್ಗವತೋರು ! ಉದ್ಧರಿಸು ॥ ೨ ॥

**ಉ**ಪ್ಪರಿಗೆಯನು ಮಾಳ್ಪೆ ತಿಪ್ಪೆಯ ।
ತಿಪ್ಪೆಯುಪ್ಪರಿಗೆಯನು ಗೈಯುವೆ ।
ಬೊಪ್ಪ ! ನಿನ್ನಯ ಸೃಷ್ಟಿ ಚೇಷ್ಟೆಯನೆಂತು ಬಣ್ಣಿಪೆನು ॥
ತಪ್ಪು ತಪ್ಪನಿಸದದು, ನಿಜವೇ ।
ತಪ್ಪೆನಿಸುವದು ದೃಷ್ಟಿಭೇದದಿ ।
ತಪ್ಪನೆಣಿಸದಲೊಪ್ಪಿಕೋ ಶ್ರೀಹರಿಯೆ ಸೇವಕನ ॥ ೩ ॥

**ಹ**ರಿಯೆ ನಿನ್ನೊಳು ಭಕ್ತಿಮುಕ್ತಿಗೆ ।
ಸರಳ ಮಾರ್ಗವದೆಂಬುವರಿಯುದೆ ।
ತಿರುತಿರುಗಿ ಮಾಯಾಪ್ರಪಂಚದಿ ಸುತ್ತಿ ಬೇಸತ್ತೆ ॥
ಪರಮಭಕ್ತಿಯೊಳೀಗ ನಿನ್ನಯ ।
ಚರಣತಲದಲಿ ಬಿದ್ದು ಬೇಡುವೆ ।
ಪರಿಹರಿಸೊ ನರಜನ್ಮವನು ಕೊಂಡೀ ಸುಮಾಂಜಲಿಯ ॥ ೪ ॥

# ವಿಜ್ಞಾಪನೆ.

ಆರ್ಯರೇ,

ಜಗನ್ನಿಯಂತನಾದ ಭಗವಂತನ ಕೃಪೆಯಿಂದ ಗ್ರಂಥಮಾಲೆಯ ಆರನೆಯ ಪುಷ್ಪವನ್ನು ತಮಗೆ ಅರ್ಪಿಸುವ ಆನಂದದ ಸಮಯವು ಒದಗಿ ಬಂದದ್ದು ತುಂಬಾ ಸಮಾಧಾನದ ಮಾತಾಗಿದೆ. ನಮ್ಮ ಮಾಲೆಯ ಮೊದಲಿನ ಐದು ಗ್ರಂಥಗಳು ಕಾದಂಬರೀ ರೂಪವಾಗಿದ್ದು, ಸಪ್ತದಳಗಳಿಂದ ಕೂಡಿದ ಈ ಆರನೆಯ ಕುಸುಮವು ಕವಿತಾರೂಪವಾಗಿದೆ. ನಮ್ಮ ಗ್ರಂಥಮಾಲೆಯ ಉದಾತ್ತವಾದ ನೀತಿಯ ತತ್ವಗಳ ಪ್ರಸಾರ, ಕನ್ನಡ ಗ್ರಂಥಗಳ ಅಂತರಂಗ ಬಾಹ್ಯಾಂಗ ಸುಧಾರಣೆ ಎಂಬ ಉದ್ದೇಶಕ್ಕೆ ಈ ಚಿಕ್ಕ ಕವಿತಾಗ್ರಂಥವನ್ನು ಪ್ರಕಟಿಸಿದ್ದರಿಂದ ಭಂಗ ಬಂದಿಲ್ಲವೆಂದು ಭಾವಿಸುವೆನು.

ಇನ್ನು, ಈ ನನ್ನ ಅಲ್ಪಕೃತಿಯನ್ನು ಆದರದಿಂದ ಓದಿ ನೋಡಿ ತಮ್ಮ ವಿದ್ಯಾರ್ಥಿಯ ಕೃತಿಯೆಂಬ ಅಭಿಮಾನ ವಾತ್ಸಲ್ಯಗಳಿಂದ ಪ್ರೇರಿತರಾಗಿ ಅದಕ್ಕೆ ಪ್ರೌಢವಾದ ಶಾಸ್ತ್ರೀಯ ವಿಚಾರಗಳಿಂದ ಕೂಡಿದ ಉತ್ತಮವಾದ ಪ್ರಸ್ತಾವನೆಯನ್ನು ಬರೆದುಕೊಟ್ಟ ನನ್ನ ಗುರೂತ್ತಮರಾದ ಶ್ರೀಯುತ **ರಾಮರಾವ ಮಹಿಷಿ** ಬಿ. ಏ. ಪ್ರಿನ್ಸಿಪಾಲ ಟ್ರೇನಿಂಗ ಕಾಲೇಜ ಇವರ ಉಪಕಾರವನ್ನು ಸದಾ ಸ್ಮರಿಸುವೆನು. ಅದರಂತೆ ಕರ್ನಾಟಕಕ್ಕೆ ಸೇರಿದ ಮರಾಟಿಗರಲ್ಲೊಬ್ಬರೂ, ಕನ್ನಡವು ಮಾತೃಭಾಷೆಯಲ್ಲದಿದ್ದರೂ ತಮ್ಮ ಭ್ರಾತೃಭಾಷೆಯೆಂಬ ಅಭಿಮಾನವನ್ನು ವಹಿಸುವವರೂ, ಮರಾಟಿಗರ ಮನದೊಳಗಿನ ಕನ್ನಡದ ವಿಷಯದ ಅಜ್ಞಾನ ಅನಾದರಗಳನ್ನು ಕಳೆಯಲೆತ್ನಿಸಿ ಕನ್ನಡಿಗರ ಪತಿಯಿಂದ ಮರಾಟಿಗರೊಡನೆ ಸ್ನೇಹ ಭಾವದ ಸಂಧಾನವನ್ನು ಹೂಡಲು ಸತತ ಪ್ರಯತ್ನಮಾಡುವವರೂ, ಮರಾಟಿಗರಾಗಿ ಕನ್ನಡದ ಪ್ರಭಾತವೆಂಬ ಕವಿತಾರೂಪ ಮಾಸಪತ್ರಿಕೆಯನ್ನು ಮರಾಟಿಗರೆಲ್ಲರೂ ತಮ್ಮ ವೈರಿಗಳೆಂದು ಭಾವಿಸುವ ಕೆಲವು ಕನ್ನಡಿಗರಿಗೆ ಸತ್ಯಸಂಗತಿಯನ್ನೂ ಸನ್ಮಾರ್ಗವನ್ನೂ ತೋರಿಸುವಂತೆ ನಡಿಸುತ್ತಿರುವ ಮಹನೀಯರೂ, ಆದ ಶ್ರೀಯುತ **ಯಶವಂತರಾವ ಜಠಾರ** ಇವರು ನನಗೆ ಈ ಸಮಯದಲ್ಲಿ ತುಂಬಾ ಸಹಾಯಮಾಡಿದರು. ಈ ಮಾತಿಗೆ ಪುಸ್ತಕದ ಬಾಹ್ಯಾಂಗದ ಆದರ್ಶಸ್ವರೂಪವೇ ಸಾಕ್ಷಿಯು. ಮತ್ತು ಮುದ್ರಣಾಲಯದ ವ್ಯವಸ್ಥಾಪಕರಾದ

ಶ್ರೀಯುತ **ಮಾಧವರಾವ ಜೋಶಿಯವರು** ಅತ್ಯಂತ ಉತ್ಸಾಹ ಆದರಗಳೊಡನೆ ತೀರ ಅಲ್ಪ ಕಾಲವಲ್ಲಿ ಅಂದರೆ ಒಂದೇ ದಿವಸದಲ್ಲಿ ಪೂರಾ ಪುಸ್ತಕವನ್ನೇ ಸಿದ್ಧ ಮಾಡಿಕೊಟ್ಟದ್ದು ಅವರಿಗೆ ತುಂಬಾ ಶ್ರೇಯಸ್ಕರವು. ಸರಿ. ಹೆಚ್ಚಿಗಿನ್ನೇನು ಹೇಳಲಿ? ಗ್ರಂಥದ ಅಂತರಂಗದ ಗುಣದೋಷ ವಿಮರ್ಶೆಯನ್ನು ತಮಗೆ ಒಪ್ಪಿಸಿರುವೆನು.

ಮಿತಿ, ವರ್ಷ ಪ್ರತಿಪದೆ, ಶಕೆ ೧೮೪೧. | ತಮ್ಮೆಲ್ಲರ ವಿಧೇಯ.
ಶ್ರೀಸರಸ್ವತೀ ಮಂದಿರ, **ವಿಜಾಪುರ.** | **ನಾರಾಯಣ.**

---

# ಕರ್ನಾಟಕ ಹಿತೈಷಿಣೀ ಗ್ರಂಥಮಾಲೆ.

ಉದಾತ್ತವಾದ ನೈತಿಕತತ್ವಗಳನ್ನು ಸುಲಭವಾದ ಐತಿಹಾಸಿಕ ಹಾಗು ಪೌರಾಣಿಕ ಕಥೆಗಳ ರೂಪದಿಂದ ಬರೆದು ಅಲ್ಲಲ್ಲಿಗೆ ಮನೋಹರವಾದ ಚಿತ್ರಗಳನ್ನು ಸೇರಿಸಿ ಆರಾರು ತಿಂಗಳಿಗೊಂದರಂತೆ ಪ್ರತಿವರ್ಷ ಎರಡು ಸರ್ವಾಂಗಸುಂದರವಾದ ಗ್ರಂಥಗಳನ್ನು ಪ್ರಕಟಿಸುವೆವು. ಅವುಗಳಲ್ಲಿ ೧ ಪೌರಾಣಿಕ, ೧ ಐತಿಹಾಸಿಕ ಕಥೆಗಳಿರುವವು. ಗ್ರಂಥಮಾಲೆಯ ಕಾರ್ಯಂವರ್ಗಣೀದಾರರಿಗೆ ಎಲ್ಲ ಗ್ರಂಥಗಳನ್ನು ಕ್ಷಿ ಬೆಲೆಗೆ ಕೊಡುವೆವು. ಅಂಥವರು ಮಾಲೆಯಲ್ಲಿ ಪ್ರಕಟವಾಗುವ ಎಲ್ಲಗ್ರಂಥಗಳನ್ನು ಕೊಂಡುಕೊಳ್ಳುವೆವೆಂದು ಒಪ್ಪಿಕೊಂಡು ನಾಲ್ಕಾಣೆ ಪ್ರವೇಶಫೀಯನ್ನು ಕೊಟ್ಟು ತಮ್ಮ ಹೆಸರನ್ನು ರಜಿಸ್ಟರಮಾಡಿಸಿಕೊಳ್ಳಬೇಕಾಗುವದು. ಇಂದಿನವರೆಗೆ ಪ್ರಕಟಿಸಲ್ಪಟ್ಟ ಗ್ರಂಥಗಳು:—

| | | | |
|---|---|---|---|
| (೧) ಸಾವಿತ್ರೀ-ಸತ್ಯವಾನ | (ಸಚಿತ್ರ) | ಪೌರಾಣಿಕ ಕಥೆ | ೦-೧೨-೦ |
| (೨) ಪದ್ಮಿನಿ | ,, | ಐತಿಹಾಸಿಕ ಕಥೆ | ೦-೧೨-೦ |
| (೩) ದಾಕ್ಷಾಯಿಣೀ | ,, | ಪೌರಾಣಿಕ ಕಥೆ | ೦-೮-೦ |
| (೪) ಮಹಾರಾಣಿ ಲಕ್ಷ್ಮೀಬಾಯಿ | ,, | ಐತಿಹಾಸಿಕ ಕಥೆ | ೦-೧೨-೦ |
| (೫) ಪಾರ್ವತಿ | ,, | ಪೌರಾಣಿಕ ಕಥೆ | ೦-೮-೦ |
| (೬) ಕವಿತಾ ಕುಸುಮ ಮಂಜರಿ | | ಖಂಡಕಾವ್ಯ | |

**ವ್ಯವಸ್ಥಾಪಕ— ಶ್ರೀಸರಸ್ವತೀಮಂದಿರ, ವಿಜಾಪುರ.**